# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಆಗಸ್ಟ್ ೨೧, ೨೦೧೪ (ಶ್ರಾವಣ ೩೦, ಶಕ ವರ್ಷ ೧೯೩೬)<br>Bangalore, Thursday, August 21, 2014 (Shravana 30, Shaka Varsha 1936) | ಸಂಚಿಕೆ ೩೪<br>Issue 34 |
|---|---|---|

## ಭಾಗ ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕೃಷಿ ಮಾರಾಟ ಇಲಾಖೆ**

**ಕೃಷಿ ಮಾರಾಟ ನಿರ್ದೇಶಕರ ಕಛೇರಿ, ನಂ.16, 11ನೇ ರಾಜಭವನ ರಸ್ತೆ, ಬೆಂಗಳೂರು**

**ಅಧಿಸೂಚನೆ**

**ಸಂ.ಕೃಮಾಇ/ನಿಯವಿ/ಉ.ಮಾ.ಪ್ರಾ/251/13-14, ದಿನಾಂಕ: 09-06-2014**

ಕರ್ನಾಟಕ ಕೃಷಿ ಉತ್ಪನ್ನ ಮಾರುಕಟ್ಟೆ ವ್ಯವಹಾರ (ನಿಯಂತ್ರಣ ಮತ್ತು ಅಭಿವೃದ್ಧಿ) ಅಧಿನಿಯಮ, 1966ರ ಕಲಂ 6(2)ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಕರ್ನಾಟಕದಲ್ಲಿ ಕೃಷಿ ಮಾರಾಟ ಇಲಾಖೆಯ ನಿರ್ದೇಶಕನಾಗಿರುವ ಪಿ.ಎಸ್.ವಸ್ತ್ರದ ಆದ ನಾನು ತಿಪಟೂರು ಕೃಷಿ ಉತ್ಪನ್ನ ಮಾರುಕಟ್ಟೆ ಸಮಿತಿಯ ಮಾರುಕಟ್ಟೆ ಕ್ಷೇತ್ರದಲ್ಲಿ ಅಧಿಸೂಚಿತ ಹಣ್ಣು ಮತ್ತು ತರಕಾರಿಗಳ ಮಾರಾಟ ನಿಯಂತ್ರಣಕ್ಕಾಗಿ ತಿಪಟೂರು ನಗರದ ಹಳೆಪಾಳ್ಯ ರಸ್ತೆಯಲ್ಲಿರುವ ಸಮಿತಿಯ 2 ಎಕರೆ ಪ್ರದೇಶವನ್ನು ಈ ಕೆಳಗಿನ ಅನುಸೂಚಿಯಲ್ಲಿ ನಿರ್ದಿಷ್ಟಪಡಿಸಿದ ಚಕ್ಕುಬಂದಿಯನ್ನೊಳಗೊಂಡಂತೆ "**ಮಾರುಕಟ್ಟೆ ಉಪ ಪ್ರಾಂಗಣ**" ಎಂದು ಘೋಷಿಸಿದ್ದೇನೆ.

**ಅನುಸೂಚಿ**

ಹಳೆಪಾಳ್ಯ ರಸ್ತೆಯಲ್ಲಿನ 2 ಎಕರೆ ಪ್ರದೇಶದಲ್ಲಿ ಈ ಕೆಳಗಿನ ಸೀಮಾಬದ್ಧ ಸ್ಥಳ:-

| | | |
|---|---|---|
| ಪೂರ್ವಕ್ಕೆ | : | ತಿಪಟೂರು ಹಳೆಪಾಳ್ಯ ರಸ್ತೆ |
| ಪಶ್ಚಿಮಕ್ಕೆ | : | ತಿಪಟೂರು ಕೆರೆ ಅಂಗಳದ (ಸಣ್ಣ ನೀರಾವರಿ ಇಲಾಖೆಗೆ ಸೇರಿದ ಜಮೀನು) ಉಳಿಕೆ ಜಾಗ |
| ಉತ್ತರಕ್ಕೆ | : | ಕೆ.ಆರ್. ಬಡಾವಣೆಗೆ ಹೋಗುವ 3ನೇ ಮುಖ್ಯ ರಸ್ತೆ |
| ದಕ್ಷಿಣಕ್ಕೆ | : | ಸಣ್ಣ ನೀರಾವರಿ ಇಲಾಖೆಯ ಜಮೀನು |

**PR- 403**
**SC-30**

ಪಿ.ಎಸ್.ವಸ್ತ್ರದ
ನಿರ್ದೇಶಕರು

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ನ್ಯಾಯಾಲಯ**

**ಅರಣ್ಯ ಅಪರಾಧ ಮೊಕ್ಕದ್ದಮೆ ಸಂಖ್ಯೆ: 88/2012-13 ದಿನಾಂಕ: 08/11/2012**

**ಸಂಖ್ಯೆ:ಎ1.ಎಫ್‌ಒಸಿ.88/2012-13, ದಿನಾಂಕ:24-06-2014**

| | | |
|---|---|---|
| **ಉಪಸ್ಥಿತರು** | : | ಶ್ರೀ ಎನ್.ಡಿ. ಸುದರ್ಶನ್, ಪ್ರಾಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು |
| **ಪಿರ್ಯಾದಿ** | : | ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿದಳ, ಬೆಂಗಳೂರು |
| **ಅರ್ಜಿದಾರರು : ಆರೋಪಿಗಳು** | : | ಪತ್ತೆಯಾಗಿರುವುದಿಲ್ಲ |

**ಪ್ರಕರಣದ ಮುಖ್ಯಾಂಶಗಳು :**

ದಿನಾಂಕ:08-11-2012ರಂದು ಬೆಳಿಗ್ಗೆ ಬೆಂಗಳೂರು ಅರಣ್ಯ ಸಂಚಾರಿ ದಳದ ವ್ಯಾಪ್ತಿಯಲ್ಲಿರುವ ಹಳೇ ಮದ್ರಾಸ್ ರಸ್ತೆ ಅರಣ್ಯ ತನಿಖಾ ಠಾಣೆಯಲ್ಲಿ ಸಿಬ್ಬಂದಿ ತಪಾಸಣಾ ಕಾರ್ಯದಲ್ಲಿದ್ದಾಗ ಹೊಸಕೋಟೆ ಕಡೆಯಿಂದ ಬೆಂಗಳೂರು ಕಡೆಗೆ ಅನುಮಾನಸ್ಪದವಾಗಿ ಬರುತ್ತಿದ್ದ ನೋಂದಣಿ ಸಂಖ್ಯೆಯ ನಾಮಫಲಕವಿಲ್ಲದ ಮಿನಿ ವಾಹನವನ್ನು ತಪಾಸಣೆಗಾಗಿ ನಿಲ್ಲಿಸಲು ಸೂಚಿಸಲಾಗಿ, ವಾಹನವು ನಿಲ್ಲಿಸದೇ ವೇಗವಾಗಿ ಚಲಿಸಿದ ಕಾರಣ, ಸದರಿ ವಾಹನವನ್ನು ಹಿಂಬಾಲಿಸಲಾಗಿ, ವಾಹನದಲ್ಲಿದ್ದ ಇಬ್ಬರು ಆಸಾಮಿಗಳು ವಾಹನವನ್ನು ರಸ್ತೆಯಲ್ಲಿಯೇ ಬಿಟ್ಟು ಪರಾರಿಯಾಗಿರುತ್ತಾರೆ. ಸದರಿ ವಾಹನವನ್ನು ಪರಿಶೀಲಿಸಲಾಗಿ, ವಾಹನದ ಮೇಲ್ಭಾಗದಲ್ಲಿ ಉಪ್ಪಿನ ಮೂಟೆಗಳು ತುಂಬಿದ್ದು, ಮೂಟೆಗಳ ಕೆಳಭಾಗದಲ್ಲಿ ಮರದ ತುಂಡುಗಳಿರುವುದು ಕಂಡುಬಂದಿರುತ್ತದೆ. ನಂತರ ವಾಹನದಲ್ಲಿ ತುಂಬಿದ್ದ ಮರದ ತುಂಡುಗಳನ್ನು ಕೂಲಂಕಶವಾಗಿ ಪರಿಶೀಲಿಸಲಾಗಿ;, ಅದರ ಗುಣಮಟ್ಟ ಹಾಗೂ ನೈಜತೆಯಿಂದಾಗಿ ರಕ್ತಚಂದನ ಮರದ ಜಾತಿಗೆ ಸೇರಿರುತ್ತದೆಂದು ಖಾತರಿಪಡಿಸಿಕೊಂಡು ಸದರಿ ತುಂಡುಗಳನ್ನು ಎಣಿಕೆ ಮಾಡಲಾಗಿ, ಒಟ್ಟು 56 ತುಂಡುಗಳಿದ್ದು, ಅಳತೆ 0.499 ಘನ ಮೀಟರ್ ಹಾಗೂ 12 ಸಂಖ್ಯೆ ರಕ್ತಚಂದನ ಮರದ ಪೋಲ್ಸ್‌ಗಳು ಸಹ ಇರುತ್ತದೆ. ವಾಹನವನ್ನು ಅಜಮಾಯಿಸಿ ನೋಡಲಾಗಿ, ಟಾಟಾ ಕಂಪನಿಯ ಸೂಪರ್ ಎಸ್ ಮಿನಿ ಲಗೇಜ್ ವಾಹನವಾಗಿದ್ದು, ವಾಹನದ ಸುತ್ತಲೂ ನೋಂದಣಿ ಸಂಖ್ಯೆಯ ನಾಮಫಲಕವಿರುವುದಿಲ್ಲ. ಈ ಸಂಬಂಧ ವಾಹನದ ಒಳಭಾಗದಲ್ಲಿನ ಇಂಜಿನ್ ಸಂಖ್ಯೆಯನ್ನು ನೋಡಲಾಗಿ 12HO568-M8H1232 ಎಂದು ಹಾಗೂ ಚಾಸ್ಸಿ ಸಂಖ್ಯೆ:MAT483139CYH21351 ಎಂದು ಮುದ್ರಿತವಾಗಿರುತ್ತದೆ. ಆಸಾಮಿಗಳು ಪರಾರಿಯಾದ ಕಾರಣ ಕಾನೂನು ಬಾಹಿರವಾಗಿ ಅಕ್ರಮ ಸಾಗಾಣಿಕೆ ಮಾಡಲು ಯತ್ನಿಸಿರುವುದು ಕಂಡುಬಂದ ನಿಮಿತ್ತ ಈ ಕೃತ್ಯವು ಕರ್ನಾಟಕ ಅರಣ್ಯ ಕಾಯ್ದೆ 1963 ಸೆಕ್ಷನ್ 62, 71ಎ, 79, 80 ಹಾಗೂ ಕರ್ನಾಟಕ ಅರಣ್ಯ ಅಧಿನಿಯಮ 1969ರ ನಿಯಮ 144 ಉಲ್ಲಂಘನೆಯಾಗಿರುವುದರಿಂದ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:88/2012-13 ದಾಖಲಿಸಿ ಸೂಪರ್ ಎಸ್ ಮಿನಿ ಲಗೇಜ್ ವಾಹನವನ್ನು ಮಾಲು ಸಮೇತ ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಮುಂದಿನ ಕ್ರಮಕ್ಕಾಗಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರುಪಡಿಸಿರುತ್ತಾರೆ. ಜಪ್ತು ಮಾಡಲಾದ ಮುದ್ದೆಮಾಲನ್ನು ಸುರಕ್ಷತೆಗಾಗಿ ಅರಣ್ಯ ಭವನದ ದಾಸ್ತಾನು ಮಳಿಗೆಯಲ್ಲಿ ಹಾಗೂ ವಾಹನವನ್ನು ಅರಣ್ಯ ಸಂಚಾರಿ ದಳದ ಕಛೇರಿಯ ಆವರಣದಲ್ಲಿ ಇಡಲಾಗಿರುತ್ತದೆ.

ಪ್ರಕರಣದ ತನಿಖೆ ನಡೆಸಿದ ವಲಯ ಅರಣ್ಯಾಧಿಕಾರಿಗಳು ವಾಹನ ಹಾಗೂ ಸ್ವತ್ತಿಗೆ ಸಂಬಂಧಿಸಿದ ವಾರಸುದಾರರು ಹಾಜರಾಗದೇ ಇರುವ ಕಾರಣ, ಅಮಾನತ್ತುಪಡಿಸಿಕೊಂಡಿರುವ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ಟಾಟಾ ಕಂಪನಿಯ ಸೂಪರ್ ಎಸ್ ಮಿನಿ ಲಗೇಜ್ ವಾಹನವನ್ನು ಹಾಗೂ ಅದರಲ್ಲಿದ್ದ ಒಟ್ಟು 0.499 ಘನ ಮೀಟರ್ 56 ಸಂಖ್ಯೆಯ ರಕ್ತಚಂದನ ಮರದ ತುಂಡುಗಳನ್ನು ಮತ್ತು 12 ಸಂಖ್ಯೆಯ ರಕ್ತಚಂದನ ಮರದ ಪೋಲ್ಸ್‌ಗಳನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಕ್ರಮ ಜರುಗಿಸುವಂತೆ ವರದಿಯಲ್ಲಿ ಕೋರಿರುತ್ತಾರೆ.

ಜಪ್ತು ವಾಹನದ ನೋಂದಣಿ ಸಂಖ್ಯೆ ಲಭ್ಯವಾಗದ ಕಾರಣ, ದಿನಾಂಕ:08-12-2012 ರಂದು ಸಂಜೆವಾಣಿ ಮತ್ತು ಈ ಸಂಜೆ ದಿನಪತ್ರಿಕೆಗಳಲ್ಲಿ ಪತ್ರಿಕಾ ಪ್ರಕಟಣೆಯನ್ನು ಹೊರಡಿಸಿ 30 ದಿವಸಗಳೊಳಗಾಗಿ ವಾಹನಕ್ಕೆ ಸಂಬಂಧಪಟ್ಟ ವಾರಸುದಾರರು ಪ್ರಾಧಿಕಾರದ ಮುಂದೆ ಹಾಜರಾಗಲು ಸೂಚಿಸಲಾಗಿತ್ತು. ತದನಂತರ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಕಛೇರಿಯಿಂದ ವಾಹನದ ಮಾಲೀಕತ್ವದ ವಿವರಗಳನ್ನು ತಿಳಿಯಲು ಟಾಟಾ ಮೋಟರ್ಸ್ ಲಿಮಿಟೆಡ್, ಮುಂಬೈ ಇವರಿಗೆ ದಿನಾಂಕ:12-12-2012ರಲ್ಲಿ ಪತ್ರ ಬರೆಯಲಾಗಿದ್ದು, ಅದರಂತೆ ವಾಹನವು ಶ್ರೀ ಬಯ್ಯಾರೆಡ್ಡಿ ಬಿನ್ ಸಿದ್ದಾರೆಡ್ಡಿ, ಪೆದ್ದಯ್ಯಗಾರಿಪಲ್ಲಿ, ವೆಮರಿಕೋಟ, ಮೊಳಕಾಲಚೆರುವು, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ ಎಂಬುವವರ ಹೆಸರಿಗೆ ದಿನಾಂಕ:30-09-2012ರಲ್ಲಿ ತಾತ್ಕಾಲಿಕ ನೋಂದಣಿಯಾಗಿರುವುದಾಗಿ ಸಂಸ್ಥೆಯವರು ದಿನಾಂಕ:31-12-2012ರಲ್ಲಿ ತಿಳಿಸಿರುತ್ತಾರೆ. ಸದರಿ ವಿಳಾಸಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ಪ್ರಕಾರ ನೋಟೀಸನ್ನು ದಿನಾಂಕ:04-01-2013 ರಲ್ಲಿ ಜಾರಿ ಮಾಡಲಾಗಿ, ಸದರಿ ವಿಳಾಸದಲ್ಲಿ ಶ್ರೀ ಜಿ. ಬಯ್ಯಾರೆಡ್ಡಿ ಬಿನ್ ಸಿದ್ದಾರೆಡ್ಡಿ ಎಂಬುವವರು ಇರುವುದಿಲ್ಲವೆಂಬ ಹಿಂಬರಹದೊಂದಿಗೆ ಅಂಚೆ ಕಛೇರಿಯಿಂದ ನೋಂದಾಯಿತ ಅಂಚೆ ಲಕೋಟೆಯು ದಿನಾಂಕ: 13-01-2013 ರಂದು ವಾಪಸ್ ಈ ಕಛೇರಿಗೆ ತಲುಪಿರುತ್ತದೆ.

ತದನಂತರ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಚಿತ್ತೂರು, ಆಂಧ್ರಪ್ರದೇಶ ಇವರಿಗೆ ದಿನಾಂಕ: 03-04-2014ರಲ್ಲಿ ಪತ್ರ ಬರೆದು ವಾಹನದ ಮಾಲೀಕತ್ವದ ವಿವರಗಳನ್ನು ನೀಡುವಂತೆ ಕೋರಲಾಗಿತ್ತು. ಸದರಿ ಕಛೇರಿಯಿಂದ ದಿನಾಂಕ:11-04-2014ರಲ್ಲಿ ನೀಡಲಾದ ವರದಿಯಂತೆ ವಾಹನವು ಶ್ರೀ ಜಿ.ಬಯ್ಯಾರೆಡ್ಡಿ ಬಿನ್ ಸಿದ್ದಾರೆಡ್ಡಿ, ಪೆದ್ದಯ್ಯಗಾರಿಪಲ್ಲಿ, ವೆಮರಿಕೋಟಿ, ಮೊಳಕಾಲಚೆರುವು ಮಂಡಲಂ, ಚಿತ್ತೂರು ಜಿಲ್ಲೆ, ಆಂಧ್ರಪ್ರದೇಶ ಎಂಬುವವರಿಗೆ ಸೇರಿದ್ದು, ನೋಂದಣಿಯಾಗಿರುವುದಿಲ್ಲ ಎಂಬುದಾಗಿ ತಿಳಿದುಬಂದಿರುತ್ತದೆ. ಈ ವಿಳಾಸಕ್ಕೆ ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ಪ್ರಕಾರ ನೋಟೀಸನ್ನು ದಿನಾಂಕ:05-05-2014ರಂದು ಜಾರಿ ಮಾಡಲಾಗಿತ್ತು. ಆದರೆ, ಸದರಿ ವಿಳಾಸದಲ್ಲಿ ಶ್ರೀ ಜಿ. ಬಯ್ಯಾರೆಡ್ಡಿ ಬಿನ್ ಸಿದ್ದಾರೆಡ್ಡಿ ಎಂಬುವವರು ಇರುವುದಿಲ್ಲವೆಂಬ ಹಿಂಬರಹದೊಂದಿಗೆ ಅಂಚೆ ಕಛೇರಿಯಿಂದ ನೋಂದಾಯಿತ ಅಂಚೆ ಲಕೋಟೆಯು ದಿನಾಂಕ:16-05-2014ರಂದು ವಾಪಸ್ ಈ ಕಛೇರಿಗೆ ತಲುಪಿರುತ್ತದೆ. ಸದರಿ ವಾಹನದ ವಾರಸುದಾರರಾಗಲೀ ಅಥವಾ ಅವರ ಪರ ವಕೀಲರಾಗಲೀ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ರವರ ಸಮಕ್ಷಮ ಹಾಜರಾಗಲು ವಿಫಲವಾಗಿರುವುದರಿಂದ ಹಾಗೂ ಮಾಲು ಮತ್ತು ವಾಹನವನ್ನು ಏಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ವಾಹನದ ಮಾಲೀಕರು ಆಕ್ಷೇಪಣೆಯನ್ನು ಪ್ರಾಧಿಕಾರದ ಮುಂದೆ ಸಲ್ಲಿಸದೇ ಇರುವ ಕಾರಣ, ವಿಚಾರಣಾ ಸಮಯದಲ್ಲಿ ವಾಹನದಲ್ಲಿ ಮಾಲೀಕರಿಗೆ ಆಸಕ್ತಿ ಇಲ್ಲವೆಂದು ಪರಿಗಣಿಸಲಾಯಿತು.

ಪ್ರಕರಣಕ್ಕೆ ಸಂಬಂಧಿಸಿದ ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳಾದ ಶ್ರೀ ತಿಮ್ಮರಾಯಪ್ಪ ಬಿನ್ ಚಿಕ್ಕರಂಗಯ್ಯ, ವಲಯ ಅರಣ್ಯಾಧಿಕಾರಿ, ಶ್ರೀ ಸಿ. ಮುನಿರಾಜು ಬಿನ್ ಚಿಕ್ಕಮುನಿಯಪ್ಪ, ಅರಣ್ಯ ರಕ್ಷಕ, ಶ್ರೀ ಎಂ. ಕೃಷ್ಣ ಬಿನ್ ಮುನಿಯಪ್ಪ ಹಾಗೂ ಶ್ರೀ ಮುನಿರಾಜು ಬಿನ್ ನಾರಾಯಣಪ್ಪ ಇವರುಗಳ ಮುಖ್ಯ ವಿಚಾರಣೆಯನ್ನು ನಡೆಸಿ ಹೇಳಿಕೆಯನ್ನು ಸಹಾಯಕ ಸರ್ಕಾರಿ ಅಭಿಯೋಜಕರ ಸಮಕ್ಷಮ ಪಡೆಯಲಾಗಿರುತ್ತದೆ.

ಸರ್ಕಾರಿ ಪರ ಎಲ್ಲಾ ಸಾಕ್ಷಿಗಳನ್ನು ವಿಚಾರಣೆಗೆ ಒಳಪಡಿಸಿದ್ದು, ಹಾಜರಿದ್ದ ಫಿರ್ಯಾದುದಾರರು ಹಾಗೂ ಸಾಕ್ಷಿಗಳು ಪ್ರಕರಣದಲ್ಲಿ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ಟಾಟಾ ಕಂಪನಿಯ ಸೂಪರ್ ಏಸ್ ಮಿನಿ ಲಗೇಜ್ ವಾಹನವು ರಕ್ತಚಂದನದ ಮರದ ತುಂಡುಗಳ ಅಕ್ರಮ ಸಾಗಣೆಯಲ್ಲಿ ಒಳಗೊಂಡಿರುವ ಬಗ್ಗೆ ಸಾಕ್ಷಿ ನೀಡಿರುವುದರಿಂದ ಹಾಗೂ ವಾಹನದ ವಾರಸುದಾರರು ಯಾವುದೇ ಆಕ್ಷೇಪಣೆಯನ್ನು ಸಲ್ಲಿಸದೇ ವಿಚಾರಣಾ ದಿನಗಳಂದು ಗೈರು ಹಾಜರಾಗಿರುವ ಕಾರಣ ಹೆಚ್ಚಿನ ವಿಚಾರಣೆ ಅವಶ್ಯಕತೆ ಇಲ್ಲವೆಂದು ಸರ್ಕಾರಿ ಸಹಾಯಕ ಅಭಿಯೋಗ ನಿರ್ದೇಶಕರು ವಾದವನ್ನು ಮಂಡಿಸಿರುತ್ತಾರೆ.

ಪ್ರಕರಣದ ಬಗ್ಗೆ ಸರ್ಕಾರಿ ಸಹಾಯಕ ಅಭಿಯೋಗ ನಿರ್ದೇಶಕರು ಮಂಡಿಸಿದ ವಾದ ಮತ್ತು ಹಾಜರುಪಡಿಸಿರುವ ದಾಖಲೆಗಳನ್ನು ಪರಿಶೀಲಿಸಲಾಯಿತು. ಪ್ರತಿವಾದಿಗಳು ಹಾಜರಿರದ ಕಾರಣ, ನನ್ನ ಎದುರಿನಲ್ಲಿ ಹಾಜರುಪಡಿಸಿರುವ ದಾಖಲೆಗಳ ಆಧಾರದ ಮೇಲೆ ತೀರ್ಮಾನವನ್ನು ಕೈಗೊಳ್ಳಬೇಕಾಗಿರುತ್ತದೆ. ತೀರ್ಮಾನವನ್ನು ಕೈಗೊಳ್ಳಲು ಈ ಕೆಳಕಂಡ ಅಂಶಗಳನ್ನು ಪರಿಗಣಿಸಬೇಕಾಗಿದೆ.

1. ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ಟಾಟಾ ಕಂಪನಿಯ ಸೂಪರ್ ಎಸ್ ಮಿನಿ ಲಗೇಜ್ ವಾಹನವು ಕರ್ನಾಟಕ ಅರಣ್ಯ ಕಾಯ್ದೆ 1963 ಮತ್ತು ನಿಯಮ 1969 ಗಳ ಉಲ್ಲಂಘನೆ ಮಾಡಿ ಅಕ್ರಮವಾಗಿ ರಕ್ತಚಂದನ ಮರದ ತುಂಡುಗಳ ಅಕ್ರಮ ಸಾಗಣೆಯಲ್ಲಿ ಒಳಗೊಂಡಿರುವುದೇ ?
2. ಸದರಿ ಪ್ರಕರಣದಲ್ಲಿ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ಟಾಟಾ ಕಂಪನಿಯ ಸೂಪರ್ ಏಸ್ ಮಿನಿ ಲಗೇಜ್ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿದೆಯೇ ?
3. ಮೇಲಿನ ಅಂಶಗಳಿಗೆ ಅನುಗುಣವಾಗಿ ಯಾವ ಆದೇಶ ?

   ಮೇಲಿನ ಅಂಶಗಳಿಗೆ ನನ್ನ ಉತ್ತರ ಈ ಕೆಳಕಂಡಂತೆ ಇರುತ್ತದೆ.
4. ಮೊದಲನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.
5. ಎರಡನೇ ಅಂಶಕ್ಕೆ ನನ್ನ ಉತ್ತರ ಅಹುದು ಎಂಬುದಾಗಿರುತ್ತದೆ.
6. ಅಂತಿಮ ಆದೇಶವನ್ನು ಈ ಕೆಳಕಂಡ ಕಾರಣಗಳಿಗೆ ನೀಡಲಾಗಿದೆ.

ದಿನಾಂಕ:08–11–2012ರಂದು ಹಳೇ ಮದ್ರಾಸ್ ರಸ್ತೆ ಅರಣ್ಯ ತನಿಖಾ ಠಾಣೆಯಲ್ಲಿ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ಟಾಟಾ ಕಂಪನಿಯ ಸೂಪರ್ ಏಸ್ ಮಿನಿ ಲಗೇಜ್ ವಾಹನವನ್ನು ತಪಾಸಣೆಗಾಗಿ ನಿಲ್ಲಿಸಲು ಸೂಚಿಸಲಾಗಿ, ವಾಹನವು ನಿಲ್ಲಿಸದೇ ವೇಗವಾಗಿ ಚಲಿಸಿರುವುದು, ವಾಹನದಲ್ಲಿ ಒಟ್ಟು 0.499 ಘನ ಮೀಟರ್ ಅಳತೆಯ 56 ಸಂಖ್ಯೆಯ ರಕ್ತಚಂದನ ಮರದ ತುಂಡುಗಳನ್ನು ಮತ್ತು 12 ಸಂಖ್ಯೆಯ ರಕ್ತಚಂದನ ಮರದ ಪೋಲ್ಸ್‌ಗಳನ್ನು ಉದ್ದೇಶ ಪೂರಕವಾಗಿ ಉಪ್ಪಿನ ಮೂಟೆಗಳ ಕೆಳಗೆ ಮುಚ್ಚಿಕೊಂಡು ಅಕ್ರಮವಾಗಿ ಸಾಗಾಣಿಕೆ ಮಾಡಲು ಯತ್ನಿಸಿರುವುದು, ಅರಣ್ಯ ಕಾಯ್ದೆಯ ಪ್ರಕಾರ ಸದರಿ ಮಾಲನ್ನು ಸಾಗಣೆ ಮಾಡಲು ಇರಬೇಕಾದ ರಹದಾರಿ ಮತ್ತು ಸಂಬಂಧಪಟ್ಟ ದಾಖಲೆಗಳು ವಾಹನದಲ್ಲಿ ಲಭ್ಯವಿಲ್ಲದೇ ಇರುವುದು ಮತ್ತು ಆಸಾಮಿಗಳು ವಾಹನವನ್ನು ಬಿಟ್ಟು ಪರಾರಿಯಾದ ಕಾರಣ ಕಾನೂನು ಬಾಹಿರವಾಗಿ ಅಕ್ರಮ ಸಾಗಾಣಿಕೆ ಮಾಡಲು ಯತ್ನಿಸಿರುವುದು ಖಾತರಿಯಾಗಿರುವುದರಿಂದ ಅರಣ್ಯ ಮೊಕದ್ದಮೆಯು ದಾಖಲಾಗಿದ್ದು ಅರಣ್ಯ ಸಿಬ್ಬಂದಿಯು ದಾಖಲಿಸಿರುವ ಮೊಕದ್ದಮೆಯ ಅರಣ್ಯ ಕಾಯ್ದೆಯ ವ್ಯಾಪ್ತಿಯಲ್ಲಿ ಸರಿ ಇರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71 ಬಿ ರಡಿ ಕಾರಣ ಕೇಳುವ ನೋಟೀಸನ್ನು ನೋಂದಾಯಿತ ಅಂಚೆ ಮುಖಾಂತರ ವಾಹನದ ವಾರಸುದಾರರಿಗೆ ಜಾರಿ ಮಾಡಿದ್ದರೂ ಸಹ ನಿಗಧಿತ ಅವಧಿಯೊಳಗೆ ಸೂಕ್ತ ದಾಖಲೆಯೊಂದಿಗೆ ಪ್ರಾಧಿಕಾರದ ಸಮಕ್ಷಮ ಹಾಜರಾಗಿರುವುದಿಲ್ಲ ಹಾಗೂ ಆಕ್ಷೇಪಣೆಗಳನ್ನು ಸಲ್ಲಿಸಿರುವುದಿಲ್ಲ. ಅಲ್ಲದೇ ಈ ಹಿಂದೆಯೇ ದಿನಪತ್ರಿಕೆಗಳಲ್ಲಿ ಪ್ರಕಟಣೆಯನ್ನು ಹೊರಡಿಸಿ 30 ದಿವಸಗಳ ಅಂತಿಮ ಗಡುವು ನೀಡಿದ್ದರೂ ಸಹ ಪ್ರಾಧಿಕಾರದ ಮುಂದೆ ಯಾವುದೇ ಅಹವಾಲು ಸಲ್ಲಿಸಿರುವುದಿಲ್ಲ.

ಸರ್ಕಾರಿ ಪರ ಫಿರ್ಯಾದುದಾರರು ಹಾಗೂ ಸಾಕ್ಷಿಗಳು ಸಹ ಸದರಿ ವಾಹನವು ಅಕ್ರಮವಾಗಿ ರಕ್ತಚಂದನ ಮರದ ತುಂಡುಗಳನ್ನು ಸಾಗಣೆ ಮಾಡುತ್ತಿದ್ದದನ್ನು ವಿಚಾರಣಾ ಸಮಯದಲ್ಲಿ ಹೇಳಿಕೆ ನೀಡಿರುತ್ತಾರೆ. ಆದುದರಿಂದ ಸದರಿ ವಾಹನವು ಕರ್ನಾಟಕ ಅರಣ್ಯ ಕಾಯ್ದೆ 1963 ಹಾಗೂ ನಿಯಮ 1969ರ ಉಲ್ಲಂಘನೆ ಮಾಡಿರುವುದು ಖಾತರಿಯಾಗಿರುತ್ತದೆ. ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಮೇರೆಗೆ ರಾಜ್ಯ ಸರ್ಕಾರ ಸ್ವತ್ತಾದ ರಕ್ತಚಂದನಕ್ಕೆ ಸಂಬಂಧಪಟ್ಟ ಅರಣ್ಯ ಮೊಕದ್ದಮೆಯಲ್ಲಿ ಒಳಗೊಂಡ ವಾಹನವನ್ನು ಅಧಿಕೃತ ಅಧಿಕಾರಿಯ ಮುಂದೆ ಹಾಜರುಪಡಿಸಿರುವುದರಿಂದ ಅಂತಹ ವಾಹನವನ್ನು ಮತ್ತು ಸರ್ಕಾರದ ಸ್ವತ್ತನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಅವಕಾಶವಿರುವುದರಿಂದ ಸದರಿ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಯೋಗ್ಯವಾಗಿರುತ್ತದೆ.

## ಆದೇಶ

ನಾನು ಎನ್.ಡಿ.ಸುದರ್ಶನ್, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಬೆಂಗಳೂರು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರ ಮೇರೆಗೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಅರಣ್ಯ ಅಪರಾಧ ಮೊಕದ್ದಮೆ ಸಂಖ್ಯೆ:88/2012–13, ದಿನಾಂಕ: 08–11–2012ರಲ್ಲಿ ಅಮಾನತ್ತುಪಡಿಸಿಕೊಂಡಿರುವ ಒಟ್ಟು 0.499 ಘನ ಮೀಟರ್ ಅಳತೆಯ 56 ಸಂಖ್ಯೆಯ ರಕ್ತಚಂದನ ಮರದ ತುಂಡುಗಳನ್ನು ಮತ್ತು 12 ಸಂಖ್ಯೆಯ ರಕ್ತಚಂದನ ಮರದ ಪೋಲ್ಸ್‌ಗಳನ್ನು ಹಾಗೂ ಇಂಜಿನ್ ಸಂಖ್ಯೆ:12H0568-M8H1232, ಚಾಸ್ಸಿ ಸಂಖ್ಯೆ: MAT483139CYH21351 ಮುದ್ರಿತವಾಗಿರುವ ನೋಂದಣಿ ಸಂಖ್ಯೆ ನಾಮಫಲಕವಿಲ್ಲದ ಟಾಟಾ ಕಂಪನಿಯ ಸೂಪರ್ ಏಸ್ ಮಿನಿ ಲಗೇಜ್ ವಾಹನವನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ಈ ಮೂಲಕ ಆದೇಶಿಸುತ್ತೇನೆ.

ಈ ಆದೇಶವನ್ನು ಬೆರಳಚ್ಚುಗಾರರಿಗೆ ಉತ್ತಲೇಖನ ಕೊಟ್ಟಿದ್ದು, ಅವರು ಬೆರಳಚ್ಚಿಸಿದ ನಂತರ ತಿದ್ದುಪಡಿ ಮಾಡಿ ಈ ದಿನ ದಿನಾಂಕ: 24–06–2014ರಂದು ತೆರೆದ ನ್ಯಾಯಾಲಯದಲ್ಲಿ ಘೋಷಿಸಲಾಗಿದೆ.

ಈ ಆದೇಶವು ರಾಜ್ಯಪತ್ರದಲ್ಲಿ ಪ್ರಕಟವಾದ 30 ದಿವಸಗಳ ನಂತರ ಜಾರಿಗೆ ಬರುತ್ತದೆ.

**ಎನ್.ಡಿ.ಸುದರ್ಶನ್**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಬೆಂಗಳೂರು

PR- 466
SC-10

## ನಗರಾಭಿವೃದ್ಧಿ ಇಲಾಖೆ

### ಅಧಿಸೂಚನೆ

**ಸಂಖ್ಯೆ:ನಅಇ 101 ನಯೋಸೇ 2012 ಬೆಂಗಳೂರು, ದಿನಾಂಕ: 25-06-2014**

ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಹೆಚ್ಚುವರಿ ನಿರ್ದೇಶಕರ ವೃಂದದ ದಿನಾಂಕ:01-01-2014ರಲ್ಲಿದ್ದಂತೆ ಈ ಕೆಳಕಂಡ ಕರಡು ಜ್ಯೇಷ್ಠತಾ ಪಟ್ಟಿಯಲ್ಲಿ ನೀಡಲಾಗಿರುವ ಸ್ಥಾನ, ಸೇವಾ ವಿವರಗಳು ಮುಂತಾದವುಗಳ ಬಗ್ಗೆ ಆಕ್ಷೇಪಣೆಗಳೇನಾದರೂ ಇದ್ದಲ್ಲಿ ಅಂತಹ ಆಕ್ಷೇಪಣೆಗಳನ್ನು ಅವಶ್ಯವಿರುವ ದಾಖಲೆಗಳೊಂದಿಗೆ ಹಾಗೂ ಸಮರ್ಥನೆಗಳೊಂದಿಗೆ ಈ ಪ್ರಕಟಣೆ ಹೊರಡಿಸಿದ 15 ದಿನದೊಳಗಾಗಿ ಸಲ್ಲಿಸುವಂತೆ ಸೂಚಿಸಲಾಗಿತ್ತು.

ಸದರಿ ತಾತ್ಕಾಲಿಕ ಜೇಷ್ಠತಾ ಪಟ್ಟಿಗೆ ನಿಗಧಿತ ಅವಧಿಯೊಳಗೆ ಯಾವುದೇ ಆಕ್ಷೇಪಣೆಗಳನ್ನು ಸ್ವೀಕರಿಸಿರುವುದಿಲ್ಲ. ಅದರಂತೆ ದಿನಾಂಕ:01-01-2014 ರಲ್ಲಿದ್ದಂತೆ ನಗರ ಮತ್ತು ಗ್ರಾಮಾಂತರ ಯೋಜನಾ ಇಲಾಖೆಯ ಹೆಚ್ಚುವರಿ ನಿರ್ದೇಶಕರ ಹುದ್ದೆಯ ಅಂತಿಮ ಜೇಷ್ಠತಾ ಪಟ್ಟಿಯನ್ನು ಈ ಕೆಳಕಂಡಂತೆ ಪ್ರಕಟಿಸಲಾಗಿದೆ.

| ಕ್ರಮ ಸಂ. | ಹೆಸರು ಶ್ರೀ/ಶ್ರೀಮತಿ | ನೇರ ನೇಮಕಾತಿ/ ಮುಂಬಡ್ತಿ/ ಇತರೆ | ಮೀಸಲಾತಿ ವರ್ಗ | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ನೈಜವಾಗಿ ಮುಂಬಡ್ತಿ ಹೊಂದಿದ ದಿನಾಂಕ | ಜ್ಯೇಷ್ಠತೆಗೆ ನೈಜವಾಗಿ ಅರ್ಹತಾ ದಿನಾಂಕ |
|---|---|---|---|---|---|---|---|
| 1 | ಶ್ರೀ ಎಸ್.ಎಸ್.ಟೋಪಗಿ | ಮುಂಬಡ್ತಿ | – | 28-03-1954 | 06-01-1984 | 22-10-2008 | 21-10-2008 |
| 2 | ಶ್ರೀ ಎಸ್.ಬಿ. ಹೊನ್ನೊರ್ | ಮುಂಬಡ್ತಿ | – | 25-07-1955 | 15-11-1983 | 23-10-2008 | 25-10-2008 |
| 3 | ಶ್ರೀ ಬಿ.ಎಂ. ತಿರಕನಗೌಡರ್ | ಮುಂಬಡ್ತಿ | – | 01-05-1956 | 07-11-1983 | 28-04-2009 | 03-04-2009 |
| 4 | ಶ್ರೀ ಚೌಡೇಗೌಡ | ಮುಂಬಡ್ತಿ | – | 01-06-1956 | 20-12-1982 | 03-04-2009 | 03-04-2009 |
| 5 | ಶ್ರೀ ಎ.ವಿ. ರಂಗೇಶ್ | ಮುಂಬಡ್ತಿ | – | 06-09-1956 | 10-06-1983 | 08-04-2009 | 03-04-2009 |
| 6 | ಡಾ॥ ಬಿ.ಮಹೇಂದ್ರ | ಮುಂಬಡ್ತಿ | – | 01-06-1959 | 23-04-1984 | 16-09-2009 | 15-09-2009 |
| 7 | ಶ್ರೀ ಕೆ.ಆರ್. ವಿರೇಂದ್ರನಾಥ | ಮುಂಬಡ್ತಿ | – | 08-11-1954 | 01-06-1975 | 30-04-2011 | 13-12-2010 |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ

**ಟಿ.ಎಂ. ವಾಸುದೇವ ರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ

ನಗರಾಭಿವೃದ್ಧಿ ಇಲಾಖೆ

**PR- 471**

**SC-100**

## ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ ನಿಯಮಿತ

**ನಂ. 16-ಡಿ, 4ನೇ ಮಹಡಿ, ದೇವರಾಜ ಅರಸು ಭವನ, ಮಿಲ್ಲರ್ಸ್ ಟ್ಯಾಂಕ್ ಬೆಡ್ ಏರಿಯಾ, ವಸಂತನಗರ, ಬೆಂಗಳೂರು-560052.**

### ಅಧಿಸೂಚನೆ

**ಸಂಖ್ಯೆ : ದೇಹಿನಿ/ಸಿಬ್ಬಂದಿ/ನೇನೇ/ಸಿ.ಆರ್.-49/2012-13, ದಿನಾಂಕ : 20-05-2014.**

**ವಿಷಯ :** ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್-ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013 ರಡಿಯಲ್ಲಿ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ವಿವಿಧ ವೃಂದಗಳಲ್ಲಿ ಹೈದರಾಬಾದ್-ಕರ್ನಾಟಕ ಪ್ರದೇಶದವರಿಗಾಗಿ ಹುದ್ದೆಗಳನ್ನು ಗುರುತಿಸುವ ಕುರಿತು.

**ಉಲ್ಲೇಖ :** 1. ಸರ್ಕಾರಿ ಅಧಿಸೂಚನೆ ಸಂಖ್ಯೆ : ಡಿಪಿಎಆರ್/06/ಪಿಎಲ್ಎಕ್ಸ್/2012, ದಿನಾಂಕ : 06-11-2013.

2. ಸರ್ಕಾರಿ ಅಧಿಸೂಚನೆ-I, ಅಧಿಸೂಚನೆ-II ಸಂಖ್ಯೆ : ಡಿಪಿಎಆರ್/43/ಹೆಚ್‌ಕೆಸಿ/2013, ದಿನಾಂಕ : 29-01-2014.

1. ಭಾರತೀಯ ಸಂವಿಧಾನ ಅನುಚ್ಛೇಧ-371(ಜೆ)ಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಕರ್ನಾಟಕ ಸಾರ್ವಜನಿಕ ಉದ್ಯೋಗ (ಹೈದರಾಬಾದ್ -ಕರ್ನಾಟಕ ಪ್ರದೇಶಕ್ಕೆ ನೇಮಕಾತಿಯಲ್ಲಿ ಮೀಸಲಾತಿ) ಆದೇಶ, 2013ರ ಕಂಡಿಕೆ 13ರ ಅನ್ವಯ ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮದ ಕೇಂದ್ರ ಕಛೇರಿಯು, ರಾಜ್ಯ ಮಟ್ಟದ ಕಛೇರಿ ಎಂದು ಗುರುತಿಸಲಾಗಿರುತ್ತದೆ.

2. ಅದರಂತೆ ಕಛೇರಿಯ ಸೇವೆಯಲ್ಲಿನ ಹುದ್ದೆಗಳಲ್ಲಿ ವೃಂದಗಳವಾರು ಹೈದರಾಬಾದ್-ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ಲಭ್ಯವಿರುವ ಶೇ. 8 ರಷ್ಟು ಹುದ್ದೆಗಳನ್ನು ಮೀಸಲಿರಿಸಿ ಅನುಸೂಚಿ-1 ರಲ್ಲಿರುವಂತೆ ಈ ಕೆಳಗಿನಂತೆ ಅಧಿಸೂಚಿಸಲಾಗಿದೆ.

3. ಸದರಿ ನಿಯಮಗಳ ಕಂಡಿಕೆ(3)ರನ್ವಯ ನಿಗಮದ ವ್ಯಾಪ್ತಿಯಲ್ಲಿ ಇರುವ ಜಿಲ್ಲಾ ಮಟ್ಟದ ಕಛೇರಿಗಳಿಗೆ (ಹೈದರಾಬಾದ್-ಕರ್ನಾಟಕ ವಿಭಾಗ)ಕ್ಕೆ ಸಂಬಂಧಿಸಿದಂತೆ ಹುದ್ದೆಗಳನ್ನು ವೃಂದವಾರು, ಹೈದರಾಬಾದ್ ಕರ್ನಾಟಕ ಪ್ರದೇಶ ವ್ಯಾಪ್ತಿಯ ಸ್ಥಳೀಯ ವ್ಯಕ್ತಿಗಳಿಗೆ ನಿಗದಿಪಡಿಸಿರುವ ಈ ಕೆಳಕಂಡ ಶೇಕಡವಾರು ಮೀಸಲಿರಿಸಿ ಅನುಸೂಚಿ-2ರಲ್ಲಿ ಇರುವಂತೆ ಅಧಿಸೂಚಿಸಲಾಗಿದೆ.

| ಕ್ರಮ ಸಂಖ್ಯೆ | ಗುಂಪು | ಶೇಕಡಾವಾರು |
|---|---|---|
| 1 | ಗ್ರೂಪ್–ಎ | 75% |
| 2 | ಗ್ರೂಪ್–ಬಿ | 75% |
| 3 | ಗ್ರೂಪ್–ಸಿ | 80% |
| 4 | ಗ್ರೂಪ್–ಡಿ | 85% |

**ಅನುಸೂಚಿ–1**

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ ರೂ. | ಮಂಜೂರಾದ ವೃಂದ ಬಲ (ವೃ. ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮಕಾತಿ | ರಾಜ್ಯ ಮಟ್ಟದ ವ್ಯಾಪ್ತಿಯ ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ. 8 ರಷ್ಟು ಹುದ್ದೆಗಳು | | |
|---|---|---|---|---|---|---|---|---|
| | | | | | | ಮು | ನೇ. ನೇ. | ಒಟ್ಟು |
| 1 | 2 | 3 | 4 | 5 | 6 | 13 | 14 | 15 |
| **ಗ್ರೂಪ್ ಎ ವೃಂದ** | | | | | | | | |
| 1 | ವ್ಯವಸ್ಥಾಪಕ ನಿರ್ದೇಶಕರು | ಸ್ವಂತ ವೇತನ ಶ್ರೇಣಿ | 01 | ನಿಯೋಜನೆ ಹುದ್ದೆ<br>01 | | ಇಲ್ಲ | ಇಲ್ಲ | ಇಲ್ಲ |
| 2 | ಪ್ರಧಾನ ವ್ಯವಸ್ಥಾಪಕರು (ಆಡಳಿತ ಮತ್ತು ವಸೂಲಾತಿ) ಮತ್ತು (ಅಭಿವೃದ್ಧಿ) | 36300–53850 | 02 | ಶೇ. 100 ಮುಂಬಡ್ತಿ<br>02 | | ಇಲ್ಲ | ಇಲ್ಲ | ಇಲ್ಲ |
| 3 | ಪ್ರಧಾನ ವ್ಯವಸ್ಥಾಪಕರು (ಹಣಕಾಸು & ಲೆಕ್ಕಪತ್ರ) | 36300–53850 | 01 | ಶೇ. 100 ಮುಂಬಡ್ತಿ<br>01 | | ಇಲ್ಲ | ಇಲ್ಲ | ಇಲ್ಲ |
| 4 | ಕಂಪನಿ ಕಾರ್ಯದರ್ಶಿ | 36300–53850 | 01 | ನಿಯೋಜನೆ ಹುದ್ದೆ<br>– | 01 | ಇಲ್ಲ | ಇಲ್ಲ | ಇಲ್ಲ |
| 5. | ಸಹಾಯಕ ಕಾರ್ಯಪಾಲಕ ಅಭಿಯಂತರರು | 28100–50100 | 01 | ನಿಯೋಜನೆ ಹುದ್ದೆ<br>– | 01 | ಇಲ್ಲ | ಇಲ್ಲ | ಇಲ್ಲ |
| 6 | ಲೆಕ್ಕಾಧಿಕಾರಿಗಳು | 28100–50100 | 01 | ಶೇ. 100 ನೇಮಕಾತಿ<br>– | 01 | ಇಲ್ಲ | ಇಲ್ಲ | ಇಲ್ಲ |
| | **ಒಟ್ಟು** | | **07** | **04** | **03** | **0** | **0** | **0** |
| **ಗ್ರೂಪ್ ಬಿ ವೃಂದ** | | | | | | | | |
| 7 | ರಿಕವರಿ ಆಫೀಸರ್ | 22800–43200 | 04 | ಶೇ. 50<br>02 | ಶೇ. 50<br>02 | 01 | ಇಲ್ಲ | 01 |
| 8 | ಆಡಿಟ್ ಆಫೀಸರ್ | 22800–43200 | 01 | ಶೇ. 100 ಮುಂಬಡ್ತಿ<br>01 | – | ಇಲ್ಲ | ಇಲ್ಲ | ಇಲ್ಲ |
| 9 | ಕಂಪ್ಯೂಟರ್ ಪ್ರೋಗ್ರಾಮರ್ | 22800–43200 | 01 | ನಿಯೋಜನೆ ಹುದ್ದೆ<br>– | 01 | ಇಲ್ಲ | ಇಲ್ಲ | ಇಲ್ಲ |
| 10 | ಸಹಾಯಕ ಅಭಿಯಂತರರು | 22800-43200 | 01 | ನಿಯೋಜನೆ ಹುದ್ದೆ<br>– | 01 | ಇಲ್ಲ | ಇಲ್ಲ | ಇಲ್ಲ |
| | **ಒಟ್ಟು** | | **07** | **03** | **04** | **01** | **0** | **0** |

| 1 | 2 | 3 | 4 | 5 | 6 | 13 | 14 | 15 |
|---|---|---|---|---|---|---|---|---|
| **ಗ್ರೂಪ್ ಸಿ ವೃಂದ** | | | | | | | | |
| 11 | ಲೆಕ್ಕ ಅಧೀಕ್ಷಕರು | 20000–36300 | 01 | ಶೇ. 100 ಮುಂಬಡ್ತಿ<br>01 | <br>– | ಇಲ್ಲ | ಇಲ್ಲ | ಇಲ್ಲ |
| 12 | ಪ್ರ.ದ.ಸ/ಸ.ಅ.ಅ. | 14550–26700 | 06 | ಶೇ. 10<br>01 | ಶೇ. 90<br>05 | ಇಲ್ಲ | 01 | 01 |
| 13 | ಡಾಟಾ ಎಂಟ್ರಿ ಆಪರೇಟರ್ | 14550–26700 | 06 | ಶೇ. 100 ನೇಮಕಾತಿ<br>– | <br>06 | ಇಲ್ಲ | 01* | 01* |
| 14 | ಶೀಘ್ರಲಿಪಿಗಾರರು | 14550–26700 | 02 | ಶೇ. 100 ನೇಮಕಾತಿ<br>– | <br>02 | | | |
| 15 | ಲೆಕ್ಕ ಸಹಾಯಕರು | 14550–26700 | 09 | ಶೇ. 100 ನೇಮಕಾತಿ<br>– | <br>09 | ಇಲ್ಲ | 01 | 01 |
| 16 | ಹಿರಿಯ ಚಾಲಕರು | 14550–26700 | 01 | ಶೇ. 100 ಮುಂಬಡ್ತಿ<br>01 | <br>– | ಇಲ್ಲ | ಇಲ್ಲ | ಇಲ್ಲ |
| 17 | ದ್ವಿ.ದ.ಸ. | 11600–21000 | 06 | ಶೇ. 100 ನೇಮಕಾತಿ<br>– | <br>06 | ಇಲ್ಲ | 01 | 01 |
| 18 | ಚಾಲಕರು | 11600–21000 | 03 | ಶೇ 100 ನೇಮಕಾತಿ<br>– | <br>03 | ಇಲ್ಲ | 01 | 01 |
| | **ಒಟ್ಟು** | | **34** | **03** | **31** | **00** | **05** | **05** |
| **ಗ್ರೂಪ್ ಡಿ ವೃಂದ** | | | | | | | | |
| 19 | ಗ್ರೂಪ್ 'ಡಿ' | 9600–14550 | 05 | ಶೇ. 100 ನೇಮಕಾತಿ<br>– | <br>05 | ಇಲ್ಲ | 01 | 01 |
| | **ಒಟ್ಟು** | | **05** | **–** | **05** | **–** | **01** | **01** |
| | **ಒಟ್ಟು ಎ+ಬಿ+ಸಿ+ಡಿ** | | **53** | **10** | **43** | **01** | **06** | **07** |

*ಖಾಲಿ ಹುದ್ದೆ ಆಧಾರಿತ ಮತ್ತು ಸುತ್ತು ಸರದಿ ಮೇಲೆ

## ಅನುಸೂಚಿ–2

## ಹೈದರಾಬಾದ್–ಕರ್ನಾಟಕ ವಿಭಾಗಕ್ಕೆ ಸೇರಿರುವ 6 ಜಿಲ್ಲೆಗಳಿಗೆ ಸಂಬಂಧಿಸಿದಂತೆ ಗುರುತಿಸಿರುವ ಹುದ್ದೆಗಳು

| ಕ್ರ. ಸಂ. | ಹುದ್ದೆ | ವೇತನ ಶ್ರೇಣಿ ರೂ. | ಮಂಜೂರಾದ ವೃಂದ ಬಲ (ವೃ. ಮತ್ತು ನೇ.ನಿ.ಯ ನಂತರದ ಪರಿಷ್ಕರಣೆ ಸಹಿತ) | ಮುಂಬಡ್ತಿ | ನೇರ ನೇಮ ಕಾತಿ | ಹೈದರಾಬಾದ್–ಕರ್ನಾಟಕ ವ್ಯಾಪ್ತಿಯ ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ. 75 ರಷ್ಟು ಹುದ್ದೆಗಳು | | |
|---|---|---|---|---|---|---|---|---|
| | | | | | | ಮು | ನೇ. ನೇ. | ಒಟ್ಟು |
| 1 | 2 | 3 | 4 | 5 | 6 | 13 | 14 | 15 |
| **ಗ್ರೂಪ್ ಎ ವೃಂದ** | | | | | | | | |
| 1 | ಸಹಾಯಕ ಪ್ರಧಾನ ವ್ಯವಸ್ಥಾಪಕರು | 28100–50100 | 01 | ಶೇ. 100 ಮುಂಬಡ್ತಿ<br>01 | <br>– | ಇಲ್ಲ | ಇಲ್ಲ | ಇಲ್ಲ |
| | **ಒಟ್ಟು** | | **01** | **01** | **0** | **0** | **0** | **0** |

| 1 | 2 | 3 | 4 | 5 | 6 | 13 | 14 | 15 |
|---|---|---|---|---|---|---|---|---|
| **ಗ್ರೂಪ್ ಬಿ ವೃಂದ** | | | | | | | | |
| 2 | ಜಿಲ್ಲಾ ವ್ಯವಸ್ಥಾಪಕರು | 22800–43200 | 06 | ಶೇ. 50 | ಶೇ. 50 | 02 | 03 | 05 |
| | | | | 03 | 03 | | | |
| | **ಒಟ್ಟು** | | **06** | **03** | **03** | **02** | **03** | **05** |
| **ಗ್ರೂಪ್ ಸಿ ವೃಂದ** | | | | | | **ಹೈ–ಕ ವ್ಯಾಪ್ತಿಯ ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ. 80 ರಷ್ಟು ಹುದ್ದೆಗಳು** | | |
| 3 | ಅಭಿವೃದ್ಧಿ ಅಧಿಕಾರಿ | 20000–36300 | 05 | ಶೇ. 50 | ಶೇ. 50* | 01 | 03 | 04 |
| | | | | 02 | 03 | | | |
| 4 | ಸಹಾಯಕ ಅಭಿವೃದ್ಧಿ ಅಧಿಕಾರಿ | 14550–26700 | 06 | ಶೇ. 10 | ಶೇ. 90 | 01 | 04 | 05 |
| | | | | 01 | 05 | | | |
| 5 | ದ್ವಿ.ದ.ಸ. | 11600–21000 | 06 | ಶೇ. 100 ನೇಮಕಾತಿ | | ಇಲ್ಲ | 05 | 05 |
| | | | | – | 06 | | | |
| | **ಒಟ್ಟು** | | **17** | **03** | **14** | **02** | **12** | **14** |
| **ಗ್ರೂಪ್ ಡಿ ವೃಂದ** | | | | | | **ಹೈ–ಕ ವ್ಯಾಪ್ತಿಯ ಸ್ಥಳೀಯ ವೃಂದದಲ್ಲಿ ಹೈ–ಕ ಪ್ರದೇಶದವರಿಗಾಗಿ ಗುರುತಿಸಲಾದ ಶೇ. 85 ರಷ್ಟು ಹುದ್ದೆಗಳು** | | |
| 6 | **ಗ್ರೂಪ್ ಡಿ** | 9600–14550 | ಇಲ್ಲ | ಇಲ್ಲ | ಇಲ್ಲ | ಇಲ್ಲ | ಇಲ್ಲ | ಇಲ್ಲ |
| | **ಒಟ್ಟು ಎ+ಬಿ+ಸಿ+ಡಿ** | | **24** | **07** | **17** | **04** | **15** | **19** |

*75% DR as One time measure

**ವ್ಯವಸ್ಥಾಪಕ ನಿರ್ದೇಶಕರು,**
ಡಿ. ದೇವರಾಜ ಅರಸು ಹಿಂದುಳಿದ ವರ್ಗಗಳ ಅಭಿವೃದ್ಧಿ ನಿಗಮ (ನಿ),
ಬೆಂಗಳೂರು–52.

**P.D. 55**
**SC-300**

## ಕಂದಾಯ ಸಚಿವಾಲಯ

## ಅಧಿಸೂಚನೆ

### ಸಂಖ್ಯೆ : ಕಂಇ 17 ಎಲ್‌ಆರ್‌ಎಂ 2014, ಬೆಂಗಳೂರು, ದಿನಾಂಕ : 31–05–2014.

ಬಿ.ಎ.ಎಂ.ಎಲ್. ನೌಕರರ ಗೃಹ ನಿರ್ಮಾಣ ಸಹಕಾರ ಸಂಘ (ನಿ), ಬೆಳವಾಡಿ ಮೈಸೂರು ಜಿಲ್ಲೆ, ಇವರಿಗೆ ಮೈಸೂರು ತಾಲ್ಲೂಕಿನ ವಾಜಮಂಗಲ, ಚಿಕ್ಕಹಳ್ಳಿ, ಹಾಗೂ ಭುಗತಹಳ್ಳಿ ಗ್ರಾಮಗಳ ವಿವಿಧ ಸರ್ವೆ ನಂಬರ್‌ಗಳಲ್ಲಿ ಒಟ್ಟು 83 ಎಕರೆ 28.5 ಗುಂಟೆ ಜಮೀನನ್ನು **ವಸತಿ ನಿರ್ಮಾಣದ** ಉದ್ದೇಶಕ್ಕಾಗಿ ಖರೀದಿಸಲು ಸರ್ಕಾರದ ಅಧಿಸೂಚನೆ ಸಂಖ್ಯೆ : ಕಂಇ 12 ಎಲ್‌ಆರ್‌ಎಂ 2010, ದಿನಾಂಕ : 07–01–2011 ರಲ್ಲಿ ಕರ್ನಾಟಕ ಭೂ ಸುಧಾರಣೆ ಅಧಿನಿಯಮ 1961ರ ಕಲಂ 109(1ಎ)ರಡಿಯಲ್ಲಿ ನೀಡಲಾದ ಅನುಮತಿಯ ಅವಧಿಯು ದಿನಾಂಕ : 07–01–2013ಕ್ಕೆ ಮುಕ್ತಾಯವಾಗಿರುವ ಹಿನ್ನೆಲೆಯಲ್ಲಿ ಸಕಾಲದಲ್ಲಿ ಉದ್ದೇಶವನ್ನು ಪೂರೈಸಿಕೊಳ್ಳಲು ಉಂಟಾದ ಅನಿವಾರ್ಯ ಕಾರಣಗಳನ್ನು ಸರ್ಕಾರವು ಪರಿಶೀಲಿಸಿದ ನಂತರ ಅರ್ಜಿದಾರರ ಉದ್ದೇಶ ಪೂರೈಸಿಕೊಳ್ಳಲು ಕರ್ನಾಟಕ ಭೂ ಸುಧಾರಣೆ ನಿಯಮಗಳು 1974ರ ನಿಯಮ 38(ಡಿ)ರಂತೆ ಸದರಿ ಅವಧಿಯನ್ನು ದಿನಾಂಕ : 07–01–2013 ರಿಂದ ಅನ್ವಯಿಸುವಂತೆ 2 ವರ್ಷದ ಮಿತಿಗೆ ಒಳಪಟ್ಟು ಕಾಲಾವಧಿ ವಿಸ್ತರಿಸಿ ಆದೇಶಿಸದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ.ಎಂ. ದಾಕ್ಷಾಯಣಮ್ಮ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಭೂ ಸುಧಾರಣೆ).

**P.R. 392**
**SC-20**

## ನಗರಾಭಿವೃದ್ಧಿ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ ನಅಇ 01 ಬೆಮಪ್ರಾ 2014, ಬೆಂಗಳೂರು, ದಿನಾಂಕ : 27–05–2014.

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4(ಎ) ರನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸುತ್ತಾ, ಕರ್ನಾಟಕ ಸರ್ಕಾರವು ಶಿರಹಟ್ಟಿ ಪಟ್ಟಣ ಪಂಚಾಯ್ತಿ ವ್ಯಾಪ್ತಿ ಪ್ರದೇಶವನ್ನು ಸ್ಥಳೀಯ ಯೋಜನಾ ಪ್ರದೇಶವೆಂದು ಘೋಷಿಸಲಾಗಿದೆ. ಹಾಗೂ ಇದೇ ಕಾಯ್ದೆಯ ಕಲಂ 2(7)(ಬಿ) ರಲ್ಲಿನ ಅವಕಾಶದಂತೆ ಶಿರಹಟ್ಟಿ ಪಟ್ಟಣ ಪಂಚಾಯಿತಿಯು ಯೋಜನಾ ಪ್ರಾಧಿಕಾರವಾಗಿ ಕೂಡಲೇ ಜಾರಿಗೆ ಬರುವಂತೆ ಕಾರ್ಯನಿರ್ವಹಿಸತಕ್ಕದ್ದು.

P.R. 393
SC-50

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ನಗರಾಭಿವೃದ್ಧಿ ಸಚಿವಾಲಯ
## ಅಧಿಸೂಚನೆ
### ಸಂಖ್ಯೆ ನಅಇ 59 ಗುಅಪ್ರಾ 2014, ಬೆಂಗಳೂರು, ದಿನಾಂಕ : 03–06–2014.

ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ–5 ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಕರ್ನಾಟಕ ಸರ್ಕಾರವು ಕೊಪ್ಪಳ ಜಿಲ್ಲೆ, ಕುಷ್ಟಗಿ ಪಟ್ಟಣದ ಸ್ಥಳೀಯ ಯೋಜನಾ ಪ್ರದೇಶದ ವ್ಯಾಪ್ತಿಗೆ ಒಳಪಡುವ ಪ್ರದೇಶಗಳ ಹಾಲಿ ಭೂ ಉಪಯೋಗಗಳ ನಿರ್ಧರಣಾ ದಿನಾಂಕವನ್ನು ದಿನಾಂಕ : 01–03–2014 ರಿಂದ ಜಾರಿಗೆ ಬರುವಂತೆ ನಿರ್ಧರಿಸಿ ಈ ಮೂಲಕ ಘೋಷಿಸಲಾಗಿದೆ.

P.R. 394
SC-50

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

## ಪೊಲೀಸ್ ಕಮೀಷನರ್‌ರವರ ಕಛೇರಿ, ಬೆಂಗಳೂರು ನಗರ, ಬೆಂಗಳೂರು
## ಅಧಿಸೂಚನೆ
### ಸಂಖ್ಯೆ : 160/ಸಂ.ವಿ./ಸಿ.ಒ.ಪಿ./2014, ಬೆಂಗಳೂರು, ದಿನಾಂಕ : 29–04–2014.

ಬೆಂಗಳೂರು ನಗರ ಚಿಕ್ಕಪೇಟೆ ಸಂಚಾರ ಪೊಲೀಸ್ ಠಾಣಾ ವ್ಯಾಪ್ತಿಯಲ್ಲಿರುವ **ಜಿ.ಟಿ. ರಸ್ತೆಯ ರೈಲ್ವೆ ನಿಲ್ದಾಣದ ಪ್ರವೇಶ ದ್ವಾರದಲ್ಲಿರುವ** ಅಧಿಸೂಚನೆಯಾಗಿರುವ ಆಟೋರಿಕ್ಷಾ ನಿಲ್ದಾಣದಿಂದ ಇತರೆ ವಾಹನಗಳ ಸುಗಮ ಸಂಚಾರಕ್ಕೆ, ಗಣ್ಯ ವ್ಯಕ್ತಿಗಳ ಸಂಚಾರಕ್ಕೆ ಹಾಗೂ ಇತರೆ ಸಾರ್ವಜನಿಕರ ಓಡಾಟಕ್ಕೆ ಅಡಚಣೆಯಾಗುತ್ತಿರುವುದರಿಂದ ಸಾರ್ವಜನಿಕರ ಹಿತದೃಷ್ಟಿಯಿಂದ ಈ ಕೆಳಕಂಡ ಸ್ಥಳದಲ್ಲಿ ಆಟೋ ನಿಲ್ದಾಣ ಅಧಿಸೂಚನೆಯನ್ನು ರದ್ದುಪಡಿಸಿ ಆದೇಶಿಸಿರುತ್ತೇನೆ.

**ಆದುದರಿಂದ ಕಲಂ 115 ಮೋಟಾರು ವಾಹನ ಕಾಯ್ದೆ 1988 ಹಾಗೂ ಕಲಂ 3, ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 1960ರ ಪ್ರಕಾರ ಬೆಂಗಳೂರು ನಗರ ಪೊಲೀಸ್ ಕಮೀಷನರ್ ಶ್ರೀ ರಾಘವೇಂದ್ರ ಹೆಚ್. ಔರಾದ್‌ಕರ್ ಆದ ನಾನು ಈ ಕೆಳಕಂಡ ನಿಬಂಧನೆಗಳನ್ನು ಆದೇಶಿಸಿರುತ್ತೇನೆ.**

**ಆಟೋ ನಿಲ್ದಾಣ ನಿಷೇಧಿಸಿದ ಸ್ಥಳದ ವಿವರ**

1. **ಜಿ.ಟಿ. ರಸ್ತೆಯ ರೈಲ್ವೆ ನಿಲ್ದಾಣದ ಪ್ರವೇಶ ದ್ವಾರದ ಆಟೋ ನಿಲ್ದಾಣ**

ಅಂತೆಯೆ 1988ನೇ ಮೋಟಾರು ವಾಹನ ಕಾಯ್ದೆ, ಕಲಂ 116 ಹಾಗೂ 1960ನೇ ಕರ್ನಾಟಕ ಟ್ರಾಫಿಕ್ ಕಂಟ್ರೋಲ್ ಆಕ್ಟ್ 4 ರಲ್ಲಿ ಪ್ರದತ್ತವಾದ ಅಧಿಕಾರ ಚಲಾಯಿಸಿ, ಮೇಲ್ಕಂಡ ನಿರ್ಬಂಧನೆಗಳನ್ನು ಜಾರಿಗೊಳಿಸಲು ಅಗತ್ಯವಾದ ಸೂಚನಾ ಫಲಕಗಳನ್ನು ಅಗತ್ಯ ಸ್ಥಳಗಳಲ್ಲಿ ಹಾಕಿಸಲು ಸ್ಥಳೀಯ ಪೊಲೀಸ್ ನವರಿಗೆ ಆದೇಶ ನೀಡಿರುತ್ತೇನೆ.

ಈ ಆದೇಶವನ್ನು ನಾನು ಈ ದಿವಸ ಅಂದರೆ ದಿನಾಂಕ : 29–04–2014 ರಂದು ನನ್ನ ಸಹಿ ಹಾಗೂ ಮುದ್ರೆಯೊಂದಿಗೆ ಹೊರಡಿಸಿರುತ್ತೇನೆ.

P.R. 422
SC-100

**ಶ್ರೀ ರಾಘವೇಂದ್ರ ಹೆಚ್. ಔರಾದ್‌ಕರ್ ಐ.ಪಿ.ಎಸ್.**
ಪೊಲೀಸ್ ಕಮೀಷನರ್,
ಬೆಂಗಳೂರು ನಗರ.

## ಸಹಕಾರ ಇಲಾಖೆ
## ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ಜಿಲ್ಲಾಡಳಿತ ಭವನ, 2ನೇ ಮಹಡಿ, ಕೊಠಡಿ ಸಂ. 52, 53, ಕರೂರು ಕೈಗಾರಿಕಾ ಪ್ರದೇಶ, ಪಿ.ಬಿ. ರಸ್ತೆ, ದಾವಣಗೆರೆ, ಇವರ ಕಾರ್ಯಾಲಯ.

### ನಂ. ಡಿಆರ್/ಡಿವಿಜಿ/ಸ್ಥಗಿತ.ಸ.ಸಂಗಳು/ಸಿಆರ್–12/2012–13, ದಿನಾಂಕ : 29–03–2014.

**ವಿಷಯ :** ಸಮಾಪನೆಗೊಂಡಿರುವ ಕಾವೇರಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಮಹಿಳಾ ವಿವಿದ್ದೋದ್ದೇಶ ಸಹಕಾರ ಸಂಘ ನಿ, ಹರಿಹರ ಇದರ ನೋಂದಣಿಯನ್ನು ರದ್ದು ಪಡಿಸುವ ಬಗ್ಗೆ.

**ಉಲ್ಲೇಖ :** 1. ಸಹಕಾರ ಸಂಘಗಳ ಉಪ ನಿಬಂಧಕರು, ದಾವಣಗೆರೆ ಜಿಲ್ಲೆ, ದಾವಣಗೆರೆ ಇವರ ಪತ್ರ ಸಂಖ್ಯೆ : ಡಿಆರ್/ಡಿವಿಜಿ/ಸಮಾಪನೆ/ಸಿಆರ್–12/2012–13, ದಿನಾಂಕ : 30–03–2013.

2. ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಉಪ ವಿಭಾಗ, ದಾವಣಗೆರೆ ಇವರ ಪತ್ರ ಸಂಖ್ಯೆ : ಸನಿ31/ಸಮಾಪನೆ/ಸಿಆರ್/2013–14, ದಿನಾಂಕ : 27–03–2014.

**ಪ್ರಸ್ತಾವನೆ :**

ಮೇಲ್ಕಂಡ ವಿಷಯ ಮತ್ತು ಉಲ್ಲೇಖಗಳಿಗೆ ಸಂಬಂಧಿಸಿದಂತೆ, ಈ ಮೇಲ್ಕಂಡ ಸಹಕಾರ ಸಂಘವು ನೋಂದಣಿ ಸಂಖ್ಯೆ : ಎಆರ್–31/ಆರ್‌ಜಿಎನ್/29114/2001–02, ದಿನಾಂಕ : 03–04–2001ರಲ್ಲಿ ನೋಂದಣಿಯಾಗಿರುತ್ತದೆ. ಸಂಘದ ಕಾರ್ಯಚಟುವಟಿಕೆಗಳು ಪೂರ್ಣವಾಗಿ ಸ್ಥಗಿತಗೊಂಡಿದ್ದರಿಂದ, ಈ ಸಂಘವನ್ನು ಮುಂದುವರಿಸಿಕೊಂಡು ಹೋಗುವುದು ಸೂಕ್ತವಲ್ಲವೆಂದು ಭಾವಿಸಿ ಉಲ್ಲೇಖ (1)ರಲ್ಲಿ ಸಹಕಾರ ಸಂಘಗಳ ಉಪ ನಿಬಂಧಕರು ದಾವಣಗೆರೆ ಇವರು ದಿನಾಂಕ : 30–03–2013ರ ಆದೇಶದಲ್ಲಿ ಸಮಾಸಪನೆಗೊಳಿಸಿ ಸಹಕಾರ ಅಭಿವೃದ್ಧಿ ಅಧಿಕಾರಿ ಹರಿಹರ ಇವರನ್ನು ಸಮಾಪನಾಧಿಕಾರಿಯನ್ನಾಗಿ ನೇಮಿಸಲಾಗಿದೆ. ಸದರಿ ಸಮಾಪನಾಧಿಕಾರಿಗಳು ಸಂಘದ ಆಸ್ತಿ ಮತ್ತು ಜವಾಬ್ದಾರಿಗಳನ್ನು ವಿಲೇಮಾಡಿ ಶೂನ್ಯಗೊಳಿಸಿ ಸಂಘದ ನೋಂದಣಿಯನ್ನು ರದ್ದುಗೊಳಿಸಲು ಉಲ್ಲೇಖ (2)ರ ರೀತ್ಯಾ ಸಹಕಾರ ಸಂಘಗಳ ಸಹಾಯಕ ನಿಬಂಧಕರು, ದಾವಣಗೆರೆ ಇವರ ಮುಖಾಂತರ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಈ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ ನಂ. ಡಿಆರ್/ಡಿವಿಜಿ/ಸಮಾಪನೆ/ಸಿಆರ್–12/2012–13, ದಿನಾಂಕ : 29–03–2014.**

ಪ್ರಸ್ತಾವನೆಯಲ್ಲಿನ ಅಂಶಗಳನ್ನು ಪರಿಗಣಿಸಿ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ 1959ರ ಕಲಂ 75ರನ್ವಯ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ : ಸಿಎಂಡಬ್ಲ್ಯೂ : ಸಿಎಲ್ಎಂ : 2001, ದಿನಾಂಕ : 21–11–2001ರ ಪ್ರಕಾರ ದತ್ತವಾದ ಅಧಿಕಾರದನ್ವಯ ಜಿ. ಓಬನಾಯ್ಕ ಸಹಕಾರ ಸಂಘಗಳ ಉಪ ನಿಬಂಧಕರು ದಾವಣಗೆರೆ ಜಿಲ್ಲೆ ದಾವಣಗೆರೆ ಆದ ನಾನು ಸಮಾಪನೆಗೊಂಡ ಕಾವೇರಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದವರ ಮಹಿಳಾ ವಿವಿದ್ಧೋದ್ದೇಶ ಸಹಕಾರ ಸಂಘ ನಿ, ಹರಿಹರ ಇದರ ನೋಂದಣಿಯನ್ನು ರದ್ದುಗೊಳಿಸಿ ಆದೇಶ ಹೊರಡಿಸಿರುತ್ತೇನೆ. ಈ ರದ್ದತಿಯ ಆದೇಶದ ದಿನಾಂಕದಿಂದ ಸದರಿ ಸಂಘದ ಕಾರ್ಯ ಚಟುವಟಿಕೆಗಳು ನಿಂತುಹೋಗಿರುತ್ತವೆಂದು ಭಾವಿಸತಕ್ಕದ್ದು. ಈ ಸಂಘವು ಅಸ್ತಿತ್ವದಲ್ಲಿರುವುದಿಲ್ಲವೆಂದು ಪರಿಗಣಿಸತಕ್ಕದ್ದು ಹಾಗೂ ಕರ್ನಾಟಕ ಸಹಕಾರ ಸಂಘಗಳ ನಿಯಮಗಳು 1960ರ ನಿಯಮ 33(ಎನ್) ರನ್ವಯ ಈ ಸಂಘದ ದಾಖಲಾತಿಗಳನ್ನು ಸಹಕಾರ ಸಂಘಗಳ ಸಹಾಯಕ ನಿಬಂಧಕರು ದಾವಣಗೆರೆ ಇವರ ಕಛೇರಿಯಲ್ಲಿಡಲು ಆದೇಶಿಸಿದೆ.

ಈ ಆದೇಶವನ್ನು ನನ್ನ ಸ್ವಸಹಿ ಹಾಗೂ ಈ ಕಛೇರಿಯ ಮೊಹರಿನೊಂದಿಗೆ ಈ ದಿನ ದಿನಾಂಕ : 29–03–2014 ರಂದು ಹೊರಡಿಸಿರುತ್ತೇನೆ.

**P.R. 433** **ಸಹಕಾರ ಸಂಘಗಳ ಉಪ ನಿಬಂಧಕರು,**

**SC-10** ದಾವಣಗೆರೆ ಜಿಲ್ಲೆ, ದಾವಣಗೆರೆ.

## ಕರ್ನಾಟಕ ಲೋಕ ಸೇವಾ ಆಯೋಗದ ನಡವಳಿಗಳು

**ವಿಷಯ :** ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿನ ಪರಿವೀಕ್ಷಣಾಧಿಕಾರಿ ದರ್ಜೆ–Iರ ಹುದ್ದೆಗಳ ನೇಮಕಾತಿಗೆ ಅಭ್ಯರ್ಥಿಯಾದ ಶ್ರೀಮತಿ ಮಾಧುರಿ ಕೊಟಗಿ, ಇವರು ದುರ್ನಡತೆ ಎಸಗಿರುವ ಹಿನ್ನೆಲೆಯಲ್ಲಿ ದಂಡನೆಯನ್ನು ವಿಧಿಸುವ ಬಗ್ಗೆ.

**ಪ್ರಸ್ತಾವನೆ :**

ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿನ ಪರಿವೀಕ್ಷಣಾಧಿಕಾರಿ ದರ್ಜೆ–Iರ ಹುದ್ದೆಗೆ ಶ್ರೀಮತಿ ಮಾಧುರಿ ಕೊಟಗಿ, ಇವರು ಅಭ್ಯರ್ಥಿಯಾಗಿದ್ದು, ಆಯೋಗವು ದಿನಾಂಕ : 05–12–2013ರಂದು ನಡೆದ ಸಂದರ್ಶನಕ್ಕೆ ಹಾಜರಾಗಿರುತ್ತಾರೆ. ಪರಿವೀಕ್ಷಣಾಧಿಕಾರಿ ದರ್ಜೆ–Iರ ಹುದ್ದೆಯ ಸಂದರ್ಶನಗಳು ಮುಕ್ತಾಯವಾಗಿದ್ದು, ಮಾನ್ಯ ಉಚ್ಚ ನ್ಯಾಯಾಲಯದ ಮಧ್ಯಂತರ ಆದೇಶದಂತೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಿಸಿರುವುದಿಲ್ಲ. ಈ ಹಂತದಲ್ಲಿಯೇ ಇವರು ಆಯೋಗದ ಮೇಲೆ ಮುಂದಾಲೋಚನೆ ಇಲ್ಲದೆ ಸತ್ಯಕ್ಕೆ ದೂರವಾದ ಸುಳ್ಳು ಆಪಾದನೆಗಳನ್ನು ಮಾಡಿ ಮಾನ್ಯ ಮುಖ್ಯಮಂತ್ರಿಯವರಿಗೆ ಹಾಗೂ ಮಾನ್ಯ ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳು, ಸಂಸದೀಯ ವ್ಯವಹಾರಗಳು ಮತ್ತು ಶಾಸನ ರಚನೆ ಮತ್ತು ಪಶುಸಂಗೋಪನೆ ಸಚಿವರಿಗೆ ದೂರನ್ನು ನೀಡಿ, ಪ್ರತಿಯನ್ನು ಆಯೋಗಕ್ಕೆ ಕಳುಹಿಸಿರುತ್ತಾರೆ.

ಇದು ಅಶಿಸ್ತಿನ ನಡೆವಳಿಕೆಯಾಗಿದ್ದು, ಸಾಮಾನ್ಯ ನೇಮಕಾತಿ ನಿಯಮಗಳು 1977ರ ನಿಯಮ 20 ಅನ್ನು ವ್ಯಾಖ್ಯಾನಿಸಿದಂತೆ " ....... ಅಭ್ಯರ್ಥಿಯು ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ... ಅಥವಾ ... ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರೆ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅವಲಂಬಿಸಿರುವಿರೆಂದು .... " ಭಾವಿಸಿ ಇವರ ವಿರುದ್ಧ, ಈ ಅಶಿಸ್ತು ನಡವಳಿಕೆಗೆ ಸದರಿ ನಿಯಮಗಳನ್ವಯ ಏಕೆ ಶಿಸ್ತು ಕ್ರಮ ಕೈಗೊಳ್ಳಬಾರದೆಂದು ಕಾರಣ ಕೇಳುವ ನೋಟೀಸ್ ಅನ್ನು ಜಾರಿ ಮಾಡಿ, ಸಮಜಾಯಿಷಿಯನ್ನು ಪಡೆದು ವಿಚಾರಣೆ ಮಾಡಲಾಗಿ, ವಿಚಾರಣಾಧಿಕಾರಿಯವರು ಸದರಿ ಅಭ್ಯರ್ಥಿಯ ಮೇಲಿನ ಆರೋಪವು ನಿಸ್ಸಂದೇಯವಾಗಿ ಸಾಬೀತಾಗಿರುತ್ತದೆ ಎಂದು ವರದಿಯನ್ನು ನೀಡಿರುತ್ತಾರೆ. ಆಯೋಗದ ದಿನಾಂಕ : 03–05–2014ರ ಸಭೆಯಲ್ಲಿ ನಿರ್ಣಯವಾದಂತೆ ಈ ಕೆಳಕಂಡ ಆದೇಶ ಹೊರಡಿಸಲಾಗಿದೆ.

**ಆದೇಶ ನಂ. ಆರ್(1) 64/14–15/ಪಿಎಸ್‌ಪಿ, ಬೆಂಗಳೂರು, ದಿನಾಂಕ : 11–05–2014.**

ಕರ್ನಾಟಕ ಲೋಕ ಸೇವಾ ಆಯೋಗವು ಕರ್ನಾಟಕ ನಾಗರೀಕ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು 1977ರ ನಿಯಮ–20 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯಲ್ಲಿನ ಪರಿವೀಕ್ಷಣಾಧಿಕಾರಿ ದರ್ಜೆ–Iರ ಹುದ್ದೆಯ ನೇಮಕಾತಿಯ ಅಭ್ಯರ್ಥಿಯಾದ ಶ್ರೀಮತಿ ಮಾಧುರಿ ಕೊಟಗಿ (ಸಂದರ್ಶನ ಸಂಖ್ಯೆ 106) ರವರ ಸದರಿ ಹುದ್ದೆಯ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ ಹಾಗೂ ಇವರು ಕಾರ್ಯ ನಿರ್ವಹಿಸುತ್ತಿರುವ ನೇಮಕಾತಿ ಪ್ರಾಧಿಕಾರಕ್ಕೆ ಇವರ ವಿರುದ್ಧ ಶಿಸ್ತಿನ ಕ್ರಮ ಕೈಗೊಳ್ಳುವಂತೆ ಶಿಫಾರಸ್ಸು ಮಾಡಲಾಗಿದೆ.

**P.R. 401** ಆಯೋಗದ ಆದೇಶದ ಮೇರೆಗೆ,

**SC-10** **ಆರ್. ವೆಂಕಟೇಶ್ ಕುಮಾರ್**

ಕಾರ್ಯದರ್ಶಿ (ಪ್ರಭಾರ) ಕರ್ನಾಟಕ ಲೋಕ ಸೇವಾ ಆಯೋಗ.

**ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ಇಲಾಖೆಯ ನಿರ್ದೇಶಕರ ಕಛೇರಿ,**

**ಕೆ.ಹೆಚ್.ಬಿ. ಕಾಂಪ್ಲೆಕ್ಸ್, 6ನೇ ಮಹಡಿ, ಕಾವೇರಿ ಭವನ, ಕೆಂಪೇಗೌಡ ರಸ್ತೆ, ಬೆಂಗಳೂರು-560 009.**

**ಅಧಿಸೂಚನೆ**

**ಸಂಖ್ಯೆ : ಡಿಪಿಎನ್/ಕೇಂಸ/ವಿವ/101/2013-14, ದಿನಾಂಕ : 04-06-2014.**

**ವಿಷಯ :** ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿಯಲ್ಲಿ ಸಾರ್ವಜನಿಕ ಮಾಹಿತಿ ಅಧಿಕಾರಿಯವರನ್ನು ಬದಲಾಯಿಸುವ ಬಗ್ಗೆ.

**ಉಲ್ಲೇಖ :** ಈ ಕಛೇರಿ ಅಧಿಸೂಚನೆ ಸಂಖ್ಯೆ : ಡಿಪಿಎನ್/ಕೇಂ.ಸ/ವಿವ/101/2013-14, ದಿನಾಂಕ : 11-11-2013.

ಈ ಕಛೇರಿಯ ಉಲ್ಲೇಖಿತ ಅಧಿಸೂಚನೆಯಲ್ಲಿ ಮಾಹಿತಿ ಪಡೆಯಲು ಮಾಹಿತಿ ಹಕ್ಕು ಕಾಯ್ದೆ 2005ರ ಸೆಕ್ಷನ್ 5(1) ಮತ್ತು 5(2)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಟಿ. ನಾಗರಾಜ ರೆಡ್ಡಿ, ಕಾನೂನು ಅಧಿಕಾರಿ (ಹಿರಿಯ) ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ, ಬೆಂಗಳೂರು ಇವರನ್ನು ಈ ಕಛೇರಿಯ ಸಾರ್ವಜನಿಕ ಮಾಹಿತಿ ಅಧಿಕಾರಿ ಎಂದು ನೇಮಕ ಮಾಡಲಾಗಿತ್ತು. ಈ ಕಛೇರಿಯ ದಿನಾಂಕ : 11-11-2013ರ ಉಲ್ಲೇಖಿತ ಅಧಿಸೂಚನೆಯನ್ನು ರದ್ದುಪಡಿಸಲಾಗಿದೆ. ಸದರಿ ಕಾಯ್ದೆಯ ಸೆಕ್ಷನ್ 5(1) ಮತ್ತು 5(2)ರ ಅಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಡಿ.ಎಂ. ಕಾಮೋಜಿ, ಕಾನೂನು ಅಧಿಕಾರಿ (ಹಿರಿಯ) (ಪ್ರ), ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರ ಕಛೇರಿ ಬೆಂಗಳೂರು, ಇವರನ್ನು ಈ ಕಛೇರಿಯ "**ಸಾರ್ವಜನಿಕ ಮಾಹಿತಿ ಅಧಿಕಾರಿ**" ಎಂದು ತಕ್ಷಣದಿಂದ ಜಾರಿಗೆ ಬರುವಂತೆ ನೇಮಕ ಮಾಡಲಾಗಿದೆ.

**ಚಂದ್ರಶೇಖರ ಜಿ. ಹಿರೇಮಠ**
ಅಭಿಯೋಗ ಮತ್ತು ಸರ್ಕಾರಿ ವ್ಯಾಜ್ಯಗಳ ನಿರ್ದೇಶಕರು (ಪ್ರ),
ಬೆಂಗಳೂರು.

P.R. 402
SC-50

**ನಗರಾಭಿವೃದ್ಧಿ ಸಚಿವಾಲಯ**

**ಅಧಿಸೂಚನೆ**

**ಸಂಖ್ಯೆ : ನಅಇ 120 ಬೆಂರೂಪ್ರಾ 2014, ಬೆಂಗಳೂರು, ದಿನಾಂಕ : 07-06-2014.**

ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ಪಟ್ಟಣಕ್ಕೆ ಸ್ಥಳೀಯ ಯೋಜನಾ ಪ್ರದೇಶವನ್ನು ಘೋಷಿಸಲಾಗಿದೆ. ಸದರಿ ಪ್ರದೇಶದ ವ್ಯಾಪ್ತಿಯಲ್ಲಿನ ಅಭಿವೃದ್ಧಿಗಳನ್ನು ನಿಯಂತ್ರಿಸಲು ಮತ್ತು ಮಹಾಯೋಜನೆ ತಯಾರಿಸಲು ಕರ್ನಾಟಕ ನಗರ ಮತ್ತು ಗ್ರಾಮಾಂತರ ಯೋಜನಾ ಕಾಯ್ದೆ 1961ರ ಕಲಂ 4(ಸಿ)ರಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಚಿಕ್ಕಬಳ್ಳಾಪುರ ಜಿಲ್ಲೆ, ಗೌರಿಬಿದನೂರು ಪಟ್ಟಣಕ್ಕೆ ಪ್ರತ್ಯೇಕ ಯೋಜನಾ ಪ್ರಾಧಿಕಾರವನ್ನು ರಚಿಸಿ ಆದೇಶಿಸಲಾಗಿದೆ.

ಸದರಿ ಯೋಜನಾ ಪ್ರಾಧಿಕಾರಕ್ಕೆ ನಗರ ಮತ್ತು ಗ್ರಾಮಾಂತರ ಯೋಜನಾ ಸಹಾಯಕ ನಿರ್ದೇಶಕರು, ಚಿಕ್ಕಬಳ್ಳಾಪುರ ಇವರನ್ನು ಸದಸ್ಯ ಕಾರ್ಯದರ್ಶಿಯಾಗಿ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಎಂ. ವಾಸುದೇವ ರಾವ್**
ಸರ್ಕಾರದ ಅಧೀನ ಕಾರ್ಯದರ್ಶಿ,
ನಗರಾಭಿವೃದ್ಧಿ ಇಲಾಖೆ.

P.R. 405
SC-100

**Government of India**

**Ministry of Labour**

**Labour Bureau**

**No. 112/1 (KTK) /2014 CPI Dated : 14TH April, 2014**

**Consumer Price Index Numbers for Industrial Workers (Base : 2001=100)**

**Month : APRIL 2014**

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| FOOD : | | | | | |
| (a) Cereals & Cereals Products | 259 | 293 | 257 | 260 | 298 |
| (b) Pulses & Pulses Products | 250 | 240 | 272 | 268 | 246 |
| (c) Oils & Fats | 244 | 243 | 215 | 265 | 210 |
| (d) Meat, Fish & Eggs | 388 | 327 | 323 | 310 | 311 |
| (e) Milk & Products | 296 | 273 | 250 | 265 | 290 |
| (f) Condiments & Spices | 222 | 261 | 271 | 257 | 299 |
| (g) Vegetables & Fruits | 325 | 285 | 331 | 277 | 333 |
| (h) Other Food | 263 | 286 | 270 | 260 | 266 |

| Group/Sub-Group/Centre | BELGAUM | BANGALORE | HUBLI DHARWAD | MERCARA | MYSORE |
|---|---|---|---|---|---|
| I. FOOD GROUP | 276 | 283 | 269 | 269 | 289 |
| Pan, Supari, Tobacco & Intoxicants | 262 | 248 | 252 | 223 | 266 |
| Fuel & Light | 212 | 177 | 205 | 341 | 206 |
| Housing index | 237 | 219 | 335 | 102 | 264 |
| Clothing, Bedding & Footwear | 166 | 149 | 169 | 185 | 177 |
| Miscellaneous | | | | | |
| (a) Medical care | 201 | 252 | 217 | 224 | 195 |
| (b) Education, Recreation and Amusement | 172 | 174 | 174 | 329 | 134 |
| (c) Transport and Communication | 288 | 315 | 201 | 245 | 274 |
| (d) Personal Care & Effects | 199 | 239 | 235 | 206 | 236 |
| (e) Others | 230 | 220 | 226 | 210 | 277 |
| Miscellaneous Group | 215 | 247 | 232 | 238 | 216 |
| GENERAL INDEX | 247 | 247 | 260 | 246 | 256 |

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ, ಕರ್ನಾಟಕ
ಸರ್ಕಾರ, ಬೆಂಗಳೂರು

**L.R. CHAUHAN**
ECONOMIC OFFICER

## DIRECTORATE OF ECONOMICS AND STATISTICS, BANGALORE-1

**Consumer Price Index Numbers for Industrial Workers**

**No. DES/24/PWX/2014, dated 04-06-2014**

**State : Karnataka** **Base : 1987-88=100** **Month : April**

| | Group/Sub-Group | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| | 1 | 2 | 3 | 4 | 5 | 6 | 7 | 8 | 9 | 10 | 11 | 12 |
| I. | FOOD: | | | | | | | | | | | |
| | (a) Cereals & Cereals Products | 953 | 960 | 1072 | 862 | 883 | 965 | 981 | 1021 | 801 | 1008 | 962 |
| | (b) Pulses & Pulse Products | 709 | 777 | 784 | 896 | 667 | 750 | 762 | 778 | 730 | 782 | 709 |
| | (c) Oil & Fats | 470 | 460 | 471 | 455 | 446 | 460 | 437 | 513 | 405 | 470 | 430 |
| | (d) Meat Fish & Eggs | 906 | 1067 | 1201 | 1063 | 1017 | 1070 | 953 | 1090 | 725 | 1213 | 1169 |
| | (e) Milk & Milk Products | 737 | 684 | 772 | 870 | 734 | 779 | 750 | 783 | 684 | 755 | 728 |
| | (f) Condiments & Spices | 554 | 714 | 944 | 838 | 598 | 621 | 708 | 747 | 604 | 734 | 679 |
| | (g) Vegetables & Fruits | 776 | 772 | 988 | 939 | 824 | 809 | 835 | 921 | 709 | 677 | 1035 |
| | (h) Other Food | 600 | 882 | 872 | 793 | 708 | 611 | 669 | 740 | 763 | 677 | 638 |
| | **FOOD GROUP INDEX** | **776** | **840** | **934** | **839** | **764** | **788** | **818** | **899** | **725** | **849** | **821** |
| II. | Pan, Supari, Tobacco & Intoxicants | 836 | 1064 | 933 | 869 | 728 | 885 | 773 | 856 | 592 | 738 | 839 |
| III. | Fuel & Light | 677 | 662 | 694 | 781 | 681 | 690 | 671 | 729 | 584 | 893 | 526 |

| Group/Sub-Group | | Bellary | Bhadravathi | Davangere | Dandeli | Gulbarga | Harihar | Hassan | Mandya | Mangalore | Raichur | Tumkur |
|---|---|---|---|---|---|---|---|---|---|---|---|---|
| 1 | | 2 | 3 | 4 | 5 | 6 | 7 | 8 | 9 | 10 | 11 | 12 |
| IV. | Housing | 100 | 100 | 100 | 100 | 100 | 100 | 100 | 100 | 100 | 100 | 100 |
| V. | Clothing, Bedding & Footwear | 355 | 566 | 498 | 473 | 402 | 465 | 597 | 719 | 347 | 720 | 235 |
| VI. | Miscellaneous: | | | | | | | | | | | |
| | (a) Medical Care | 751 | 966 | 644 | 492 | 387 | 350 | 675 | 634 | 465 | 507 | 374 |
| | (b) Education, Recreation & Amusement | 790 | 794 | 1103 | 488 | 942 | 1148 | 826 | 640 | 1125 | 1585 | 1006 |
| | (c) Transport & Communication | 709 | 867 | 780 | 788 | 868 | 815 | 818 | 1116 | 920 | 677 | 728 |
| | (d) Personal Care & effects | 434 | 501 | 576 | 580 | 637 | 454 | 487 | 509 | 532 | 479 | 469 |
| | (e) Other | 553 | 531 | 681 | 801 | 486 | 520 | 540 | 686 | 389 | 708 | 469 |
| | Miscellaneous Group | 609 | 676 | 735 | 612 | 653 | 635 | 628 | 650 | 663 | 740 | 577 |
| | **GENERAL INDEX** | **634** | **692** | **745** | **688** | **616** | **638** | **684** | **744** | **612** | **735** | **566** |
| | **To convert to Base 1960 Multiply by Linking Factor.** | **7.39** | **9.19** | **8.27** | **-** | **8.26** | **8.56** | **9.25** | **7.92** | **9.31** | **-** | **-** |

**P.R. 459**
**SC-05**

**ಜಂಟಿ ನಿರ್ದೇಶಕರು,**
ಆರ್ಥಿಕ ಮತ್ತು ಸಾಂಖ್ಯಿಕ ನಿರ್ದೇಶನಾಲಯ,
ಕರ್ನಾಟಕ ಸರ್ಕಾರ, ಬೆಂಗಳೂರು

## FORM NO.151

**[Rule 315]**

**COMPANIES ACT, 1956**

**Members' Voluntary Winding Up**

**Notice of Appointment of liquidator pursuant to section 516**

| | |
|---|---|
| Name of the Company | Sartene Network Solutions Private Limited |
| Nature of business | To produce, develop, purchase, sell, transfer, process, distribute, acquire, market, hire, license, use, create, operate, fabricate, construct, assemble, dispose, install, train, educate, develop, program, support, research, test, record, maintain, repair, upgrade, recondition, convert, alter, improve, service, design, import and export computer software, computer software applications, e-commerce software solutions, e-supply chain services, advances software products, electronic commerce, mobile commerce and internet services electronic data interchange applications, e-commerce, messaging services and secure network transmission services and to generally carry on the business of providing total computer solutions whether in India or abroad. |
| Address of Registered Office | 29/2, 2nd Floor, Nanjappa Mansion, K. H. Road, Bangalore, Karnataka- 560027 |

| | |
|---|---|
| Name and Address of Liquidator | Mr. Deepak Kukreja, Practicing Company Secretary<br>31/36, Basement, Old Rajinder Nagar, New Delhi- 110060 |
| Date of Appointment | 31.05.2014 |
| By whom Appointed | Appointed By the special Resolution dated May 31, 2014 passed in the Extra Ordinary General Meeting held on May 31, 2014 at C-l0, Gulmohar Park, New Delhi-110049 at 11:30 a.m. |

**For Sartene Network Solutions Pvt. Ltd.,**

(In Liquidation)

Authorised Signatory/Liquidator

**ಸಾರ್ಟೀನ್ ನೆಟ್‌ವರ್ಕ್ ಸೊಲ್ಯೂಶನ್ಸ್ ಪ್ರೈವೇಟ್ ಲಿಮಿಟೆಡ್**

**ರಿ. ಕಛೇರಿ : 29/2, 2ನೇ ಮಹಡಿ, ನಂಜಪ್ಪ ಮ್ಯಾನಷನ್, ಕೆ.ಎಚ್. ರಸ್ತೆ, ಬೆಂಗಳೂರು, ಕರ್ನಾಟಕ–560027.**

**ಸಿಐಎನ್ : ಯು72300ಕೆಎ 2004 ಪಿಟಿಸಿಒ34647**

**ಸಾರ್ವಜನಿಕ ನೋಟೀಸು**

**ಸದಸ್ಯರು ಸ್ವಯಂ ಕಂಪೆನಿ ಮುಚ್ಚುವ ವಿಷಯದಲ್ಲಿ**

ಕಂಪೆನಿಗಳ ಕಾಯ್ದೆ 1956 ಸೆಕ್ಷನ್ 485(1)ಕ್ಕನುಸಾರ ಈ ಮೂಲಕ ನೀಡಲಾದ ನೋಟೀಸು ಏನೆಂದರೆ ಮೇ 31, 2014ರಂದು ನಡೆದ ಸದಸ್ಯರ ವಿಶೇಷ ಮಹಾಸಭೆಯಲ್ಲಿ ಕೆಳಗಿನ ವಿಶೇಷ ನಿರ್ಣಯಗಳನ್ನು ಕಂಪೆನಿಯು ಅಂಗೀಕರಿಸಿದೆ.

ಎ) **ಕಂಪೆನಿಯ ಸ್ವಯಂ ಮುಚ್ಚುಗಡೆ**

ಕಂಪೆನಿಯ ಕಾಯ್ದೆ 1956 (ಕಂಪೆನಿಗಳ ಕಾಯ್ದೆ 2013 ವ್ಯಾಪ್ತಿ ಅನ್ವಯಕ್ಕೆ) ಸೆಕ್ಷನ್ 484(1)(ಬಿ) ಮತ್ತು ಅನ್ವಯವಾಗುವ ಇತರ ವಿಧಿ ಹಾಗೂ ನಿಯಮ ನಿಬಂಧನೆ, ಮಾರ್ಗದರ್ಶಿ ಸೂತ್ರ, ಕಾನೂನು (ಪ್ರಸಕ್ತ ಜಾರಿಯಲ್ಲಿರುವ ಯಾವುದೇ ಶಾಸನಾತ್ಮಕ ತಿದ್ದುಪಡಿ ಸಹಿತ) ಮತ್ತು ಕಂಪೆನಿ ಸ್ವಯಂ ಮುಚ್ಚುಗಡೆಗೆ ಸಂಬಂಧಿಸಿ ಅನುಮತಿ, ಒಪ್ಪಿಗೆ ಹಾಗೂ ಅಗತ್ಯದ ಮಂಜೂರಾತಿಗಳಿಗೆ ಒಳಪಟ್ಟು ಸದಸ್ಯರ ಸ್ವಯಂ ಕಂಪೆನಿ ಮುಚ್ಚುವ ವಿಷಯದಲ್ಲಿ ಕಂಪೆನಿ ಸದಸ್ಯರ ಒಪ್ಪಿಗೆ ಪಡೆದಿರುವ ನಿರ್ಣಯ ಅಂಗೀಕರಿಸಲಾಗಿದೆ.

**ಇನ್ನೊಂದು ನಿರ್ಣಯದಲ್ಲಿ** 31 ಮಾರ್ಚ್ 2014ರಂದು ಕಂಪೆನಿಯಿಂದ ಪಾವತಿಯಾಗತಕ್ಕ ಆಸ್ತಿಗಳು ಮತ್ತು ಸಾಲಸೋಲಗಳ ನಗದೀಕರಿಸುವ ಅಂದಾಜು ಹೇಳಿಕೆ ಹಾಗೂ ಸಾಲ್ವೆನ್ಸಿ ಘೋಷಣೆ ಕುರಿತು ನಿರ್ದೇಶಕರಿಂದ ಶಪಥ ಮೂಲಕ ದಾಖಲಿಸಲಾಗಿದೆ.

**ಮತ್ತೊಂದು ನಿರ್ಣಯದಲ್ಲಿ** ಕಂಪೆನಿಯ ಕಾಯ್ದೆಗನುಸಾರ ಕಂಪೆನಿಯ ಲಿಕ್ವಿಡೇಶನ್ ವೆಚ್ಚಗಳನ್ನು ನಿಭಾಯಿಸಿದ ಮೇಲೆ ಉಳಿದಿರುವ ಮಿಗತೆ ಶಿಲ್ಕನ್ನು ಸದಸ್ಯರೊಳಗೆ ಹಂಚಲಾಗುತ್ತದೆ. ಕಾನೂನು/ತೆರಿಗೆ/ಶಾಸನಾತ್ಮಕ ಸಾಲಸೋಲಕ್ಕೆ ಮಿತಿಹೇರದೆ ಕಂಪೆನಿಯ ಎಲ್ಲ ಸಾಲಸೋಲ ಮತ್ತು ಆಸ್ತಿ ನಗದೀಕರಿಸಿ ಲಿಕ್ವಿಡೇಟರ್‌ನಿಂದ ಪಾವತಿಯಾಗುವ ನಿರ್ಣಯವು ಪಾಸಾಗಿದೆ.

ಇನ್ನೊಂದು ನಿರ್ಣಯದಂತೆ ರೂ. 7 ಲಕ್ಷ (ಏಳು ಲಕ್ಷ ರೂಪಾಯಿ) ಹಾಗೂ ಮಾಡಿರುವ ಖರ್ಚನ್ನು ಭರ್ತಿಗೊಳಿಸುವ ಸಂಭಾವನೆಯಲ್ಲಿ ಕಂಪೆನಿಯ ಲಿಕ್ವಿಡೇಟರ್ ಆಗಿ ಶ್ರೀ ದೀಪಕ್ ಕುಕ್ರೇಜ (ಪ್ರಾಕ್ಟಿಸಿಂಗ್ ಕಂಪೆನಿ ಸೆಕ್ರೆಟರಿ ಎಫ್‌ಸಿಎಸ್ ನಂ. 4140) ಅವರನ್ನು ಕಂಪೆನಿಗಳ ಕಾಯ್ದೆ 1956 ಸೆಕ್ಷನ್ 490(1)ಕ್ಕನುಸಾರ ನೇಮಿಸಿಕೊಳ್ಳಲಾಗಿದೆ.

ಮತ್ತೊಂದು ನಿರ್ಣಯದಂತೆ ಕಂಪೆನಿ ನಿರ್ದೇಶಕರುಗಳು ಮೇಲಿನ ನಿರ್ಣಯದ ಅನುಷ್ಠಾನಕ್ಕಾಗಿ ಅಗತ್ಯವಿರುವ ಎಲ್ಲ ಅಫಿಡವಿತ್, ಡಿಕ್ಲರೇಶನ್, ಕಾಗದ ಪತ್ರ, ದಾಖಲೆಗಳು ಇತ್ಯಾದಿಗೆ ಅಗತ್ಯವಾದಾಗ ಒಂದಾಗಿ ಸಹಿ ಹಾಕುವುದಕ್ಕೆ ಅಧಿಕಾರ ಹೊಂದಿದ್ದಾರೆ.

**(ಬಿ) ಲಿಕ್ವಿಡೇಟರ್ ಮತ್ತು ಬೋರ್ಡ್ ಅಧಿಕಾರ**

ಕಂಪೆನಿ ಲಿಕ್ವಿಡೇಟರ್ ಆಗಿ ನೇಮಕಗೊಂಡಿರುವ ಶ್ರೀ ದೀಪಕ್ ಕುಕ್ರೇಜ (ಪ್ರಾಕ್ಟಿಸಿಂಗ್ ಕಂಪೆನಿ ಸೆಕ್ರೆಟರಿ) ಕೆಳಗಿನ ಅಧಿಕಾರಗಳನ್ನು ಹೊಂದಿದ್ದಾರೆ.

1) ಕಂಪೆನಿಯ ಯಾವುದೇ ದಾವೆಯ ಪ್ರತಿವಾದಿಯಾಗಲು, ಪ್ರಾಸಿಕ್ಯೂಶನ್ ಅಥವಾ ಸಿವಿಲ್ –ಕ್ರಿಮಿನಲ್ ಕಾನೂನು ಕ್ರಮ ಕೈಗೊಳ್ಳುವ ಅಧಿಕಾರ

2) ಕಂಪೆನಿ ಮುಚ್ಚುಗಡೆಯ ಲಾಭಕ್ಕಾಗಿ ಅಗತ್ಯವಾದ ಕಂಪನಿಯ ವ್ಯವಹಾರ ನಡೆಸುವ ಅಧಿಕಾರ

3) ಸಾರ್ವಜನಿಕ ಹರಾಜು ಅಥವಾ ಖಾಸಗಿ ಗುತ್ತಿಗೆಯಿಂದ ಕಂಪೆನಿಯ ಚರ ಮತ್ತು ಸ್ಥಿರ ಆಸ್ತಿಗಳ ಮಾರಾಟ ಮಾಡುವ ಅಧಿಕಾರ

4) ಕಂಪೆನಿಯ ಇಡಿ ಹೊಣೆಗಾರಿಕೆ ನಿಭಾಯಿಸುವ ಅಧಿಕಾರ

5) ಕಂಪೆನಿಯ ಆಸ್ತಿಗಳ ಭದ್ರತಾ ಪತ್ರ ಸಂಗ್ರಹಿಸುವ ಅಧಿಕಾರ

6) ಕಂಪೆನಿಯ ಮುಚ್ಚುಗಡೆ ವ್ಯವಹಾರಕ್ಕಾಗಿ ಅಗತ್ಯವಾದ ವಿಚಾರಗಳನ್ನು ನಿಭಾಯಿಸುವ ಅಧಿಕಾರ

ಮತ್ತೊಂದು ನಿರ್ಣಯದಲ್ಲಿ ಕಂಪೆನಿಗಳ ಕಾಯ್ದೆ 1956 ಸೆಕ್ಷನ್ 491(ಸೆಕ್ಷನ್ 512 ಸಹಿತ)ಕ್ಕೆ ಅನುಸಾರ ಕಂಪೆನಿ ಲಿಕ್ವಿಡೇಟರ್ ಆಗಿ ನೇಮಕಗೊಂಡಿರುವ ಶ್ರೀ ದೀಪಕ್ ಕುಕ್ರೇಜ ಹಾಗೂ ಕಂಪೆನಿ ನಿರ್ದೇಶಕರುಗಳು ಕಂಪೆನಿಯ ಮುಚ್ಚುಗಡೆಯ ಸಾಮಾನ್ಯ ವ್ಯವಹಾರ ನಿರ್ವಹಿಸುವ ಅಧಿಕಾರ ಹೊಂದಿರುತ್ತಾರೆ.

ಸ್ಥಳ : ಮುಂಬೈ

ದಿನಾಂಕ : 03–06–2014.

ಸಾರ್ಟೀನ್ ನೆಟ್‌ವರ್ಕ್ ಸೊಲ್ಯೂಶನ್ ಪ್ರೈ.ಲಿ. ಪರವಾಗಿ

**ಮೀತೇಶ್ ಕುಮಾರ್‌ಬನ್ಸಾಲ್**

ನಿರ್ದೇಶಕ

ಡಿಐಎನ್ : 03331255 703, ಪ್ಲಾಟ್ ನಂ. 13, ಜ್ಯೋತಿರ್ಮಯ

ಸಿಎಚ್‌ಎಸ್ ಲಿಮಿಟೆಡ್, ವಸಂತ್ ಕುಂಜ್, ಲೋಕ್‌ಪುರಂ ಪವರ್

ನಗರ ಬಳಿ, ಥಾಣೆ (ಪಶ್ಚಿಮ), ಮಹಾರಾಷ್ಟ್ರ

**For Sartene Network Solutions Pvt. Ltd.,**

(In Liquidation)

Authorised Signatory/Liquidator

## SARTENE NETWORK SOLUTIONS PRIVATE LIMITED

**Regd. Off.: 2912, 2nd Floor, Nanjappa Mansion, K. H. Road, Bangalore, Karnataka·560027**

**CIN: U72300KA2004PTC034647**

**PUBLIC NOTICE**

**In the matter of Members Voluntary Winding up of the Company**

Notice is hereby given pursuant to Section 485 (1) of the Companies Act, 1956 that the Company has passed the following Special resolutions at the Extra Ordinary General Meeting of its members held on May 31, 2014:

**(a) Voluntary Winding up of the Company:**

**"RESOLVED THAT** in terms of the provisions of Section 484(I)(b) and other applicable provisions, if any, of the Companies Act, 1956 (Companies Act, 2013 to the extent applicable) and all other applicable rules, regulations, guidelines and laws(including any statutory modification or re-enactment thereof for the time being enforce) and subject to all requisite approvals, permissions and sanctions with regard to voluntary winding up of the Company, the consent of the members of the company be and are hereby accorded for voluntary winding up of the Company as a members voluntary winding up.

**RESOLVED FURTHER THAT** the Declaration of Solvency and the statement of estimated realisable value of assets and liabilities thereto payable by the company as on 31st March, 2014 taken on oath by the Directors be and are hereby noted.

**RESOLVED FURTHER THAT** all the assets and liabilities of the company be realized and discharged by the liquidator and the liquidator shall pay off all the liabilities of the company including but not limited to its income tax/legal/statutory liabilities, if any, and the balance surplus, if any, shall be distributed amongst the members of the Company after meeting all the liquidation expenses, in accordance with the Companies Act.

**RESOLVED FURTHER THAT** pursuant to section 490(1) of the Companies Act,1956, Mr. Deepak Kukreja, Practising Company Secretary, FCS No. 4140 be and is hereby appointed as the liquidator of the Company for the purpose of winding up of the affairs and distributing the assets of the Company at a remuneration of INR 7,00,000/·(Rupees Seven Lakh only) plus reimbursement of out of pocket expenses at actual cost

**RESOLVED FURTHER THAT** the directors of the Company be and are hereby severally authorized to sign, execute and deliver all such affidavits, declarations, documents, papers and to do all such acts, things and deeds as may be necessary to give effect to the above resolution.'

**(b) Liquidator and Board Powers**

**"RESOLVED THAT** the powers of the Board be assumed by Mr. Deepak Kukreja, Practicing Company Secretary appointed as the Liquidator of the Company and that Mr. Deepak Kukreja, Practicing Company Secretary be and is hereby empowered to exercise the following powers:

a. to institute or defend any suit, prosecution, or other legal proceeding, civil or criminal, in the name and on behalf of the Company;

b. to carry on the business of the Company as far as may be necessary for the beneficial winding up of the Company;

c. to sell the immovable and movable property and actionable claims of the Company by public auction or private contract with power to transfer the whole thereof to any person or body corporate, or to sell the same in parcels;

d. to sell whole of the undertaking of the Company as a going concern ;

e. to raise on the security of the assets of the Company any money requisite; and

f. to do all such other things as may be necessary for winding up the affairs of the Company and distributing its assets.

